3032

-( ಶ್ರೀ ಗುರು ಕೊಟ್ಟೂರೇಶ್ವರ ಪ್ರಸನ್ನ -)-

ನಕ್ಷತ್ರಗಳ ಉತ್ಪತ್ತಿ ನಕ್ಷತ್ರಗಳಿಗೂ ಮನುಷ್ಯನಿಗೂ ಇರುವ ಸಂಬಂಧ
ಅಶ್ವಿನ್ಯಾದಿ ೨೭ ನಕ್ಷತ್ರಗಳಲ್ಲಿ ಮನುಷ್ಯರು ಮಾಡತಕ್ಕ ಕಾರ್ಯ
ಕ್ರಮ ಮತ್ತು ಆ ನಕ್ಷತ್ರಗಳಲ್ಲಿ ಉದಯಿಸಿದ ಮನುಷ್ಯ ಹಾಗೂ
ನಕ್ಷತ್ರಗಳ ಗುಣ ಕರ್ಮ ಜನನ ನಕ್ಷತ್ರದೋಷ ಲುಪ್ತನಕ್ಷತ್ರ
ದಾನಮೊದಲಾದ ಅನೇಕಾನೇಕ ವಿಷಯಗಳಿಂದ
ತುಂಬಿ ತುಳುಕಾಡುತಿಹ ಈ





## ನಕ್ಷತ್ರ ಪ್ರಕಾಶಿಕೆ

ಅರ್ಥಾತ್

# ನಕ್ಷತ್ರ ಚೂಡಾರತ್ನ





ಲೇಖಕರು
ಯಂ. ವಿ. ಎಸ್. ಕೊಟ್ರಪ್ಪಯ್ಯ ಶಾಸ್ತ್ರಿಗಳು.
ಕೊಟ್ಟೂರು. [ ಜಿಲ್ಲ ಬಳ್ಳಾರಿ ]

ಇಸ್ವಿ ೧೯೬೩

ಬೆಲೆ ೨-೨೫ ನ.ಪೈ.

— ಶ್ರೀ ಗುರು ಕೊಟ್ಟೂರೇಶ್ವರ ಪ್ರಸನ್ನ —

#  ಜ್ಯೋತಿರ್ವಿದ್ಯಾ ಭಾಂಡಾರ. 

ಈ ಗ್ರಂಥವನ್ನು ಚಿಕ್ಕ ಮಕ್ಕಳಾದಿ ಪ್ರತಿಯೊಬ್ಬರಿಗೂ ಸ್ಪಷ್ಟವಾಗಿ ತಿಳಿಯುವಂತೆ ಸರಳ ಗನ್ನಡ ಭಾಷೆಯಲ್ಲಿ ಗ್ರಂಥಾಧಾರ ಹಾಗೂ ಉದಾಹರಣೆಸಹಿತ ಬರೆಯಲಾಗಿದೆ ಇದರಲ್ಲಿಯ ಒಂದೊಂದು ವಿಷಯಕ್ಕೆ ಎಷ್ಟೇ ಬೆಲೆ ಕೊಟ್ಟರೂ ಅಲ್ಪವೆ: ಇಂಥಾ ಅಮೂಲ್ಯವಾದ ವಿಷಯಗಳಿಂದೊಡಗೂಡಿದ ಗ್ರಂಥವು ಈ ವರೆಗೂ ತಮ್ಮ ಕೈಸೇರಿರಲಾರದು ಇದನ್ನ ತರಿಸಿ ಓದಿ ನೋಡಿದರೆ ಇದರ ಮಹತ್ವ ತಮಗೆ ತಿಳಿಯುತ್ತದೆ ಆದ್ದರಿಂದ ಪ್ರತಿಯೊಬ್ಬರೂ ಅವಶ್ಯವಾಗಿ ತರಿಸಿಕೊಂಡು ಇದರ ಹೆಚ್ಚಿನ ಲಾಭವನ್ನು ಪಡೆಯಿರಿ

ಈ ಗ್ರಂಥದಲ್ಲಿ ಜ್ಯೋತಿಷ್ಯ, ಕಾಲ ಪುರುಷೋತ್ಪತ್ತಿ, ಜ್ಯೋತಿಷ್ಯಶಾಸ್ತ್ರದ ಪ್ರಾಮುಖ್ಯತೆ ತ್ರಿಸ್ಕಂಧಗಳ ವಿಚಾರ ಯುಗಭೇದ ೬೦ ಸಂವತ್ಸರಗಳ ಜ್ಞಾನ ಹಾಗೂ ಗಣನೆವಿಚಾರ, ಅಧಿಕ ಕ್ಷಯಮಾಸ, ಅಯನಗಳ ನಿರ್ಣಯ, ಸೌರಮಾನ ವೃತ್ತ ಚಾಂದ್ರಮಾನ ರೀತ್ಯ ಋತುಗಳ ಜ್ಞಾನ, ಮಾಸಗಳವಿಶೇಷ ನಿರ್ಣಯ, ಪಕ್ಷ ತಿಥಿ, ವಾರ, ನಕ್ಷತ್ರ, ಅಧಿಪತಿ, ಯೋಗ, ಕರಣ ರಾಶಿಲಗ್ನಗಳು, ನವಗ್ರಹಗಳಅಧಿಕಾರ ಹಾಗೂ ಕ್ರೂರ, ಸೌಮ್ಯಉಚ್ಚ ನೀಚ, ಮೂಲತ್ರಿಕೋಣ. ಶತ್ರು-ಮಿತ್ರತ್ವ, ಕಾಲಮಾನಪರಿಜ್ಞಾನ ಪಂಚಾಂಗ ನೋಡತಕ್ಕ ಕ್ರಮ, ಪಂಚಾಂಗವೆಂದರೇನು ಅವಕಹಡ ಚಕ್ರೋತ್ಪತ್ತಿ, ಕೋಷ್ಟಕ, ದ್ವಾದಶರಾಶಿಗಳ ನಕ್ಷತ್ರಾಂಶಭಾಗ, ನವಗ್ರಹಗಳ ಧಾತ್ವತ್ವ ನಿರ್ಣಯ, ಕುರುಡು, ಕಿವುಡು, ಮೊಂಡುರಾಶಿ, ಗುರು, ಶುಕ್ರ, ಚಂದ್ರರಿಗೆ ವೃದ್ಧತ್ವ ಬಾಲತ್ವ, ನಿರ್ಣಯ, ಪ್ರಯಾಣಕ್ಕೆ ತಿಥಿ, ವಾರ, ನಕ್ಷತ್ರ, ಯೋಗ, ಕರಣಲಗ್ನ ನಿರ್ಣಯ, ಹಾಗೂ ತ್ಯಾಜ್ಯವಿಚಾರ, ಅಮೃತಸಿದ್ಧಿ ದಗ್ಧವ್ಯತ್ಯ ಆನಂದಾದಿಯೋಗಗಳ ವಿಚಾರ ರಾಹುಕಾಲ, ಯೋಗಿನಿ ಸಾತ್ವಿಕ, ರಾಜಸ ತಾಮಸವೇಳೆ, ಶುಭಾಶುಭ ಶಕುನಗಳ ವಿಚಾರ, ಪ್ರಯಾಣ ಹಾಗೂ ಷಣ್ಮುಖ-ಪೂರ್ವಿಕರ ದೃಷ್ಟಾಂತ ಅಸಂದಾದಿ ಉತ್ಪಾತಯೋಗ ಗೌರಿ ಪಂಚಾಂಗ, ಶಿವಲಿಖಿತ, ಸರ್ವ ಮುಹೂರ್ತಾದಿ ವಿಶೇಷ ನಿರ್ಣಯ, ಸಂಕೇತೀಸ ಮುಹೂರ್ತ, ಪ್ರಥಮ ಋತುಮತಿ ಗರ್ಭಾಧಾನ, ಪುಂಸವನ ಸೀಮಂತ ನಾಮಕರಣ ಅನ್ನಪ್ರಾಶನ, ಅಕ್ಷರಾರ್ಯ ವರ್ಧಂತಿ, ಕ್ಷೌರ, ಶತ್ರುಸಂಧಿ, ಪ್ರಭುದರ್ಶನ, ಉಪನಯನ ದೀಕ್ಷಾ, ಹೊಟ್ಟೆ, ಆಭರಣ, ಭಾವಿ, ಕೆರೆ, ದೇವತಾ, ಹೊಸದಾಗಿ ಮನೆ ಕಟ್ಟುವ ಮುಹೂರ್ತಗಳ ವಿಚಾರ ಜನನ,
... ಷ ಗೋಮುಖಪ್ರಸವಶಾಂತಿ ಮ ಜನನಕ್ಷತ್ರದೋಷ
..., ತ್ಯಾಜ್ಯಪ್ರಕರಣ, ವಧೂ ವರ ಸಂಪ್ರಾಪ್ತಿ, ಗುಣ
...ದಾಹರಣೆ ಸಹಿತ ವಿವರಿಸಲಾಗಿದೆ ಅಷ್ಟವಿಧ ಲಗ್ನಗಳ,
...ಸ್ವಿನ ಭೇದ ಶಕುನ. ಸ್ತ್ರೀ-ಪುರುಷರ ಹಸ್ತ ಸಾಮು
...ವಧೂ-ವರ ಜನ್ಮ ಹಾಗೂ ನಾಮ ನಕ್ಷತ್ರಗಳ ವಿಚಾ
...ಮಾವ ಮೊದಲಾದವರ ವಿಷಕನ್ಯ, ವಿಷಪುತ್ರಯೋಗ
...ಅಂಗಾರಕದೋಷ, ಕನ್ಯಾ ಶಕುನ ಪ್ರಶ್ನಲಗ್ನದಿಂದ ವಿ
...ವಿಧವಾ, ಜಾರಸ್ತ್ರೀ ಲಕ್ಷಣಗಳು, ದಂಪದ ಅಳತೆ ವಿ
...ವ ಕ್ರಮ, ತ್ಯಾಜ್ಯ, ಸುಮುಹೂರ್ತ ಕಾಲವನ್ನು ತೆಗ
...ಗಳಬಲ, ಏಕವಿಂಶತಿ ಮಹಾದೋಷಗಳು, ಲಗ್ನ
...ಯ ವೇಳೆ, ಅಭಿಜಿದ್ಗೋಧೂಳಿ ಮುಹೂರ್ತ ಫಲ ನಿರ
...ಕ್ರಮ ಜನನಕಾಲ ಸೂತಿಕಾಗೃಹನಿರ್ಣಯ, ಬಾ
...ಂಶ, ದ್ರೇಕ್ಕಾಣ ಗ್ರಹಸ್ಪಷ್ಟ, ಸಂಧಿಟ್ಟು
..., ಸಾಮಂತ, ಶ್ರೀಮಂತಯೋಗ ಇವೇ ಮೊದ
...ಕವರ್ಗ ಆಯುರ್ದಾಯಾದಿ ದಶಾನಿರ್ಣಯ ಪ್ರ
...ಪ್ರಶ್ನೆ ಹೇಳುವರೀತಿ, ಗುಪ್ತಪ್ರಶ್ನ ಭಪ್ಪನ್ನಶಾಸ್ತ್ರ
...ಗಳು ಸಾಧಕಸ್ಪಷ್ಟತಿ ವಾಸ್ತುಪ್ರಕರಣ ಕೂಪ
...ರು ಪರೀಕ್ಷೆ ಮತ್ತು ಅನುಭವಸಿದ್ಧಾಂತವಾದ ವೈ
...ದೊಡಗೂಡಿ ತಿಳಿಸಲಾಗಿರುವ ಈ ಗ್ರಂಥವನ್ನು

...0 [ವಿ.ಪಿ. ಖರ್ಚು ಪ್ರತ್ಯೇಕ]





ಸರ್ವಜನ ಉಪಯೋಗ ಗ್ರಂಥಮಾಲೆಯ ೪ನೇ ಪುಷ್ಪ

★ ನಕ್ಷತ್ರ ಪ್ರಕಾಶಿಕೆ ★

ಅರ್ಥಾತ್

# ★ ನಕ್ಷತ್ರ ಚೂಡಾರತ್ನ ★

ಈ ಗ್ರಂಥವು ಕೊಟ್ಟೂರು ಗುರುಬಸವೇಶ್ವರ ಪಂಚಾಂಗ ಕರ್ತರಾದ ಐಯ್ಯನಹಳ್ಳಿ ನುಗ್ಗಿಹಳ್ಳಿ ಪುರವರ್ಗ ಮಠಾಧ್ಯಕ್ಷರಾದ ವೇ|| ಅಡಿವಪ್ಪಯ್ಯನವರ ತೃತೀಯಪುತ್ರ ಬ್ರಹ್ಮಶ್ರೀ ಸಿದ್ಧಾಂತಿ ಕೊಟ್ರಪ್ಪಯ್ಯ ಶಾಸ್ತ್ರಿಗಳಿಂದ ರಚಿಸಲ್ಪಟ್ಟು ಇವರ ಶ್ರೀ ಕೊಟ್ಟೂರೇಶ್ವರ ಮುದ್ರಣಾಲಯದಲ್ಲಿ ಮುದ್ರಿಸಿ ಪ್ರಕಾಶಿಸಲ್ಪಟ್ಟಿತು.

ಪ್ರಥಮ ಮುದ್ರಣ ೧೦೦೦ ಪ್ರತಿಗಳು.



ಇಸ್ವಿ ೧೯೬೩

ಬೆಲೆ. ರೂ. ೨-೨೫ (ಅಂಚೆವೆಚ್ಚ ಪ್ರತ್ಯೇಕ)

# ವಿಷಯಾನುಕ್ರಮಣಿಕೆ



ಶ್ರೀ ಗುರು ಕೊಟ್ಟೂರೇಶಾಯ ನಮ:
ಶ್ರೀ ಮಂಗಲ ಮೂರ್ತಯೇ ನಮ:



# ನಕ್ಷತ್ರ ಪ್ರಕಾಶಿಕೆ



ಅರ್ಥಾತ್

# ನಕ್ಷತ್ರ ಚೂಡಾರತ್ನ

ಶ್ಲೋಕ:— ಅಚಿಂತಾವ್ಯಕ್ತರೂಪಾಯ । ನಿರ್ಗುಣಾಯ ಗುಣಾತ್ಮನೆ ॥
ಸಮಸ್ತ ಜಗದಾಧಾರ । ಮೂರ್ತಯೇ ಬ್ರಹ್ಮಣೇನಮ: ॥

## ನಕ್ಷತ್ರಗಳೋತ್ಪತ್ತಿ ವಿಚಾರ.

ಶ್ಲೋಕ:— ಸರ್ವಾಧಾರ: ಕಾಲ: ಏತೇನ ಕಾಲಾಧೀನಾನಿ ವಿಧುರೀಶ್ವರ: ॥

ಟೀಕ— ಈ ಕಾಲವು ಸಮಸ್ತಕ್ಕೂ ಆಧಾರ ಭೂತವಾದ ಕಾರಣ ಸಮಸ್ತವೂ ಕಾಲಾಧೀನವಾಗಿರುವುದು. ಈಕಾಲವೇ ಈಶ್ವರ ಸ್ವರೂಪವಾದದ್ದು. ಇಂಥಾಕಾಲ ಸ್ವರೂಪದ ಮಹತ್ವ ವೆಂದರೆ :—

ಶ್ಲೋಕ:— ಅಣೋ ರಣುತರಸ್ಸಾ ಕ್ಷಾದೀಶ್ವರೋ ಮಹತೋ ಮಹಾನ್ ।
ಆತ್ಮಾ ಗುಹಾಯಾಂ ನಿಹಿತೋಜಂತು ಜಯತು ನಿರೀಂದ್ರಿಯ: ॥

ಟೀಕ— ಈ ಕಾಲವು ಅಣು ರೂಪವಾದದ್ದು ಮತ್ತು ಅಣುತರವಾದದ್ದು. ಇಂಥಾಕಾಲವೇ ಈಶ್ವರತ್ವವನ್ನು ಹೊಂದಿ ಮಹ ತ್ವಾಕಾಂಕ್ಷೆಯಿಂದ ಮಹತ್ತರವಾದದ್ದು. ಈ ಆತ್ಮವೆಂಬ ಗುಹೆಯಲ್ಲಿದ್ದು ಸೃಷ್ಟಿಯಂ ಮಾಡಬೇಕೆಂಬ ಅತೀಂದ್ರಿಯತ್ವವನ್ನು ಹೊಂದಿದಕಾರಣ ಈಅತೀಂದ್ರಿಯತ್ವವೇ ಸೃಷ್ಟಿಯಂ ಮಾಡ ಬೇಕೆಂಬ ಮನಸ್ಸಂಟಾಗಿ ಪರಿಣಾಮ ಹೊಂದಿತು

ಶ್ಲೋ:ಕ— ಅಥ ಸೃಷ್ಟ್ವಾ ಮನಶ್ಚಕ್ರೆ ಬ್ರಹ್ಮಾಹಂಕಾರ ಮೂರ್ತಿಧೃತ್ ।
ಮಾನಸಶ್ಚಂದ್ರ ಮಾಜಜ್ಞೆ ಸೂರ್ಯೋಕ್ಷ್ಣೋ ತೇಜಸಾಂ ನಿಧಿ: ॥

ಟೀಕ— ಸೃಷ್ಟಿಯನ್ನು ಮಾ ಡ ಬೇಕೆಂದು ಮನಸ್ಸು ಮಾಡಿದೊಡನೆಯೇ ಬ್ರಹ್ಮನ ಅಹಂಕಾರ ವು ಮೂರ್ತಿತ್ವವನ್ನು ಧರಿಸಿತು. ಆ ಮನಸ್ಸಿನಿಂದಲೇ ಚಂದ್ರನುಉತ್ಪತ್ತಿಯಾದನು ತೇಜಸ್ಸಿಗೆ ನಿಧಿಸ್ವರೂಪವಾದ ನೇತ್ರಗಳೇ ಸೂರ್ಯಸ್ವರೂಪವನ್ನು ತಾಳಿದವು.

ಶ್ಲೋಕ:— ಮನಸ ಖಂತತೋನಾಯು ರಗ್ನಿರಾಪೋ ಧರಾಕ್ರಮಾತ್ ।
ಗುಣೈಕವೃದ್ಧ್ಯಾಪಂಚೈವಂ ಮಹಾಭೂತಾ ನಿಜಜ್ಞಿರೆ॥

ಟೀಕ:– ಸೂರ್ಯ ಸ್ವರೂಪವಂ ತಾಳಿದ ನೇತ್ರಗಳ ಕಾಂತಿಯು ಮನಸ್ಸಿನಿಂದ ಎಲ್ಲಿಯ ವರೆಗೆ ಪ್ರಸರಿತೋ ಅದೆಲ್ಲವೂ ಆಕಾಶತತ್ವ. ಆಕಾಶ ತತ್ವದ ಘರ್ಷಣೆಯಿಂದ ಅಗ್ನಿತತ್ವ ಅಗ್ನಿ, ವಾಯುಗಳ ಸಂಯೋಗದಿಂದ ಅಗ್ನಿಯಲ್ಲಿ ಜಲತತ್ವ. ಅಗ್ನಿ, ಜಲಗಳ ಸಂಪರ್ಕ ದಿಂದ ಘನೀಭೂತವಾದ ಪೃಥ್ವೀ ತತ್ವವು ಉದಯಿಸಿತು ಈ ರೀತಿಯಾಗಿ ಪಂಚಭೂತ ಗಳು ಸೃಷ್ಟಿಯಾದವು— ಆಕಾಶದಲ್ಲಿ ಶಬ್ದ, ಸ್ಪರ್ಶ, ಎಂಬ ಎರಡು ಗುಣಗಳು, ತೇಜಸ್ಸಿ ನಲ್ಲಿ ಶಬ್ದ, ಸ್ಪರ್ಶ, ರೂಪ ಈ ಮೂರು ಗುಣಗಳು, ಜಲದಲ್ಲಿ ಶಬ್ದ, ಸ್ಪರ್ಶ, ರೂಪ,ರಸ ಈ ನಾಲ್ಕು ಗುಣಗಳು, ಪೃಥ್ವಿಯಲ್ಲಿ ಶಬ್ದ ಸ್ಪರ್ಶ, ರೂಪ, ರಸ, ಗಂಧ ಈ ಐದು ಗುಣ ಗಳಿಂದ ಕೂಡಿ ಪೃಥಿವ್ಯಾದಿ ಪಂಚತತ್ವಗಳು ಉತ್ಪತ್ತಿಯಾಗಿ ಮನೋನೇತ್ರಗಳಿಂದ ಕೂಡಿ ಈ ಪಂಚಭೂತಗಳು ಸೇರಿ ಸಪ್ತ ಗ್ರಹಗಳೆಂದು ಕರೆಯಲ್ಪಟ್ಟವು.

ಶ್ಲೋಕ:– ಅಗ್ನಿರಾಪೋ ಘಾನುಚಂದ್ರೌ ತತ ಶ್ಚಾಂಗಾರಕಾದಯಃ ।
ತೇಜೋ ಭೂಖಾಂಬು ವಾತೇಭ್ಯಃ ಕ್ರಮಶಃ ಪಂಚಜಜ್ಞಿರೇ ॥

ಟೀಕ– ಅಗ್ನಿ ಜಲಗಳಿಗೆ ರವಿ, ಚಂದ್ರರು, ತೇಜಸ್ಸಿಗೆ ಕುಜ, ಭೂಮಿಗೆ ಬುಧ, ಆಕಾ ಶಕ್ಕೆ ಗುರು , ಜಲಕ್ಕೆ ಶುಕ್ರ ವಾಯುವಿಗೆ ಶನಿ, ಈ ರೀತಿ ಪರಬ್ರಹ್ಮನು, ಸೃಷ್ಟಿ ಮಾಡಿದ ನಂತರ,

ಶ್ಲೋಕ:– ಅಗ್ನಿರಾಪೋ ತೇಜಭೂಮಿ ಖಂಜಲಂ ವಾಯುರೇವಚ ।
ಕ್ರಮಾತ್ಸಪ್ತಸ್ಯಮೀ ವಾರಾಃ ಏತೇ ಸಪ್ತಪ್ರಕೀರ್ತಿತಾಃ ॥

ಟೀಕ— ಅಗ್ನಿ ತತ್ವವೇ ಸೂರ್ಯ, ಮನೋತತ್ವವೇ ಚಂದ್ರ, ತೇಜಸ್ಸ ತತ್ವವೇ ಕುಜ, ಭೂತತ್ವವೇ ಬುಧ, ಆಕಾಶ ತತ್ವವೇ ಗುರು, ಜಲತತ್ವವೇ ಶುಕ್ರ, ವಾಯು, ತತ್ವವೇಶನಿ ಈರೀತಿ ಅಗ್ನಿ ಮನಸ್ಸುಗಳೊಡನೆ ಸೇರಿದ ಈಪಂಚ ಭೂತಗಳು ವಾರಸಂಜ್ಞಾ ಪ್ರಕಾರವಾಗಿ ಪ್ರವರ್ತಿಸಿದವು.

ಶ್ಲೋಕ;— ಅಗ್ನಿ ನಾಯುತ ಭೂತಾನಿ ಕ್ರಮಾತ್ ಸಪ್ತಪ್ರಕೀರ್ತಿತಾ ; ।
ಅಗ್ನಿ ರೂಪಂ ತಥಾಸೂರ್ಯಃ ಜಲರೂಪಶ್ಚ ಚಂದ್ರಮಾಃ ॥
ಪೃಥ್ವ್ಯಾ ಮೇಣ ಯಥಾಭೂತಾ ; ದ್ವಾದಶಾ ರಾಶಿಸಂಜ್ಞಕಂ ॥
ರವಿಸ್ಸೇಂದ್ರೋ ಮೇಕಮೇಕಂ ಕುಜಾದ್ಯಾಗ್ದ್ವಿರ್ದ್ವಿರಾಶಯುಃ ॥

ಟೀಕ— ಅಗ್ನಿ ಮನಸ್ಸುಗಳು ಕ್ರಮ ವಾಗಿ ಸೇರಿದ ಪಂಚಭೂತಗಳೇ ವಾರಾದಿ ಗಳು. ಈಪಂಚಭೂತಗಳು ಅಗ್ನಿ. ಮನಸ್ಸುಗಳೊಡನೆ ಕ್ರಮವಾಗಿ ಸೇರಿದ ಕಾರಣ ಹನ್ನೆರೆಡು ರಾಶಿಗಳಾದವು. ಈರಾಶಿಗಳಲ್ಲಿ ರವಿ, ಚಂದ್ರರಿಗೆ ಮಾತ್ರ ಒಂದೊಂದು ರಾಶ್ಯಾಧಿಪತ್ಯವು ಕ್ರಮವಾಗಿ ಸೇರಿಪೃಥಿವ್ಯಾದಿ ಪಂಚಭೂತ ಸ್ವರೂಪಿಗಳಾದ ಉಳಿದ ಕುಜಾದಿ ಪಂಚಗ್ರಹಗಳಿಗೆ ಎರಡೆರೆಡ.ರಾಶಿಗಳ ಅಧಿಕಾರ ಪ್ರಾಪ್ತಿಯಾಯಿತು. ಅಗ್ನಿ ತತ್ವಕ್ಕೆ, ಎರಡನೆಯದಾದ ಭೂಮಿಗೆ ಬುಧನು, ಮೂರನೆಯದಾದ ಜಲತತ್ವಕ್ಕೆ ಶುಕ್ರನು ನಾಲ್ಕನೆಯಾದ ದ ತೇಜಸ್ಸು ತತ್ವಕ್ಕೆ ಅಂಗಾರಕನು ಐದನೆಯದಾದ ಆಕಾಶಕ್ಕೆ ಗುರು, ಆರನೆಯದಾದ ವಾಯುವಿಗೆ ಶನಿಯು, ಈ ರೀತಿ ಸಿಂಹಾದಿ ಕ್ರಮವಾಗಿಬಂದ

ರಾಶಿಗಳು ವ್ಯುತ್ಕ್ರಮವಾಗಿ ಒಂದ ಮನಸ್ಸಿಗೆ ಎರಡನೆಯಾದ ಭೂಮಿಗೆ ಬುಧ, ಮೂರನೆಯದಾದ ಜಲಕ್ಕೆ ಶುಕ್ರ, ನಾಲ್ಕನೆಯದಾದ ತೇಜಸ್ಸಿಗೆ ಕುಜ, ಐದನೆಯದಾದ ಆಕಾಶಕ್ಕೆ ಗುರು, ಆರನೆಯದಾದ ವಾಯುವಿಗೆ ಶನಿ, ಈ ರೀತಿ ಪಂಚಭೂತಗಳು ಕಟಕಾದಿಕ್ರಮ, ವ್ಯುತ್ಕ್ರಮದಿಂದ ಹನ್ನೆರೆಡು ರಾಶಿಗಳ ಸ್ವರೂಪವಾಗಿ ರವ್ಯಾದಿ ಗ್ರಹ ಗಳಿಗೆ ರಾಜ್ಯಾಧಿಕಾರವು ಪ್ರಾಪ್ತವಾಯಿತು.

ಶ್ಲೋಕ:- ಪಂಚ ಭೂತಾದಿ ಸಂಯೋಗಂ ವಿಯೋಗಂಚ ಯಥಾ ಕ್ರಮಂ ।
ತತ್ಸಂಯೋಗ ವಿಯೋಗೇನ ಸಪ್ತವಿಂಶಂತಿ ಭೇದತಃ
ನಕ್ಷತ್ರ ರೂಪಿಣಂ ಭೂಯಾತ್ಸಪ್ತವಿಂಶಾತ್ಮಕಂ ಮಹೀ

ಟೀಕೆ— ಆಪಂಚ ಭೂತಗಳ ಸಂಯೋಗ ವಿಯೋಗವೇನಂದರೆ:- ಒಂದರೊಡನೆ ಎರೆಡು ಮೂರುಸೇರುವುದು, ಐದುಒಟ್ಟಿಗೆ ಸೇರಿದರೆ. ಒಂದು, ಎರೆಡುಬಿಡುವುದು, ಈ ರೀತಿಯಾಗಿ ೨೭ ಭೇದಗಳುಂಟಾಗಿ ನಕ್ಷತ್ರಗಳ ರೂಪವನ್ನುತಾಳಿ ಈ ಹಿಂದೆ ಹೇಳಿದ ಹನ್ನೆರೆಡು ರಾಶಿಗಳಿಗೆ ಅಧೀನವಾದವು. ಈ ಅಶ್ವಿನ್ಯಾದಿ ೨೭ ನಕ್ಷತ್ರಗಳಿಗೆ ಪಂಚ ಭೂತಗಳ ಸಂಯೋಗ ವಿಯೋಗದಿಂದ ಯಾವ ಯಾವ ಆಕಾರಗಳು ಉಂಟಾದವೋ ಆಯಾನಕ್ಷತ್ರಾದಿಗಳು ಆಯಾಯ ಆಕಾರದಿಂದ ಕಾಲಾಧೀನವಾಗಿ ಪೂರ್ವದಿಂದ ಪಶ್ಚಿಮಕ್ಕೆ ತಿರುಗುತ್ತವೆ.

ಇಂಥಾ ನಕ್ಷತ್ರಗಳು ನಮಗೆ ಮೇಘಗಳಿಲ್ಲದ ರಾತ್ರಿಸಮಯದಲ್ಲಿ ಚಂದ್ರನ ಪ್ರಕಾಶವಿದ್ದರೂ ಆಕಾಶದಲ್ಲಿ ಲೆಕ್ಕವಿಲ್ಲದಷ್ಟು ಪ್ರಕಾಶಮಾನವಾದ ನಕ್ಷತ್ರಗಳು ಗೋಚರಿಸುತ್ತವೆ. ಅವುಗಳಲ್ಲಿ ೨೭ ನಕ್ಷತ್ರಗಳೇ ಮುಖ್ಯವಾದವು ಏಕೆ ? ಎಂದರೆ ಒಂದುಗ್ರಾಮ ಹಾಗು ಒಂದುಕುಟುಂಬದಲ್ಲಿ ಅನೇಕಜನರಿದ್ದರೂ ಅವರಿಗೆಲ್ಲ ಓರ್ವ ಪ್ರಧಾನಪುರುಷನುಹೇಗೆ ಮುಖ್ಯಸ್ಥನಾಗಿ ಪ್ರಕಾಶಿಸುವನೋ ಹಾಗೆ, ಗಗನದಲ್ಲಿ ಕೋಟ್ಯಾಂತರ ನಕ್ಷತ್ರಗಳಿದ್ದಾಗ್ಯೂ ಅವುಗಳಲ್ಲಿ ಅಶ್ವಿನ್ಯಾದಿ ರೇವತ್ಯಾಂತ ೨೭ ನಕ್ಷತ್ರಗಳು ಮಾತ್ರ ಭೂಮಿಗೆಹೆಚ್ಚಿನ ಪ್ರಕಾಶವನ್ನುಂಟುಮಾಡುವುದರಿಂದ ಪ್ರಾಮುಖ್ಯ ತೆಯನ್ನು ಹೊಂದಿವೆ.

## ಮನುಷ್ಯರಿಗೂ ನಕ್ಷತ್ರಗಳಿಗೂ ಇರುವ ಸಂಬಂಧ ವಿಚಾರ.

ಪೃಥಿವ್ಯಾದಿ ಪಂಚತತ್ವಗಳ ಆಧಾರದಿಂದ ಗ್ರಹಗಳು, ನಕ್ಷತ್ರಗಳು, ಸೃಷ್ಟಿಯಾಗಿರು ವವು. ಅಂತೆಯೇ ಭೂಮಂಡಲದಲ್ಲಿ ಪೃಥಿವ್ಯಾದಿ ಪಂಚತತ್ವಗಳ ಆಧಾರದಿದಲೇ ಮಾನವಾದಿ ಕಲ ಕೋಟಿ ಜೀವಜಂತುಗಳು ಉದಯವಾಗಿರುತ್ತವೆ. ಪಂಚತತ್ವಗ ಳಿಂದ ಪ್ರಕಾಶಿಸಲ್ಪಡುವ ಗ್ರಹಾದಿನಕ್ಷತ್ರಗಳ ಪ್ರಕಾಶವು ಭೂಮಿಯಮೇಲೆ ಬೀಳು ವುದರಿಂದ ಮಾನವಾದಿ ಜೀವಜಂತುಗಳ ಮತ್ತು ಗ್ರಹಾದಿ ನಕ್ಷತ್ರಗಳ ಸಂಬಂಧ ಉಂಟಾಯಿತು ಗ್ರಹನಕ್ಷತ್ರಗಳ ತತ್ವಗಳು ಮನುಷ್ಯಾದಿ ಪ್ರಾಣಿಗಳ ತತ್ವಗಳಿಗಿಂತ ಪ್ರಬಲವಾದ್ದರಿಂದ ಸಕಲಪ್ರಾಣಿಗಳು ಗ್ರಹ, ಮತ್ತು ನಕ್ಷತ್ರಗಳ ಅಧೀನವಾಗಿರುತ್ತವೆ. ಮತ್ತು ಚಂದ್ರಮಂಡಲವು ಭೂಮಂಡಲಕ್ಕೆ ಸಮೀಪವಾದದ್ದು. ಅನಂತರ ಬುಧ ಮಂಡಲ. ನಂತರ ಶುಕ್ರ ತರುವಾಯ ರವಿ ಅನಂತರ ಕುಜ ಆಮೇಲೆ ಗುರು

ತರುವಾಯ ರಾಹು, ನಂತರ ಶನಿ, ಆಮೇಲೆ ನಕ್ಷತ್ರ, ಕೊನೆಗೆ ರಾಶಿಮಂಡಲಗಳಿಗೆರುತ್ತವೆ. ರಾಶಿ, ನಕ್ಷತ್ರ, ಮತ್ತು ಚಂದ್ರಮಂಡಲಗಳಿಗೆ ಪರಸ್ಪರ ಸಂಸ್ಕೃತಿ ಹೆಚ್ಚಾಗಿರುವ ಕಾರಣ ಚಂದ್ರನಿಗೆ ಶೀಘ್ರಗತಿಯುಂಟಾಯಿತು. ಆದ್ದರಿಂದ ಚಂದ್ರನು ಸಂಚರಿಸುವ ನಕ್ಷತ್ರವೇ ನಿತ್ಯ ನಕ್ಷತ್ರವೆಂದು ಪರಿಗಣಿಸಲ್ಪಡಬೇಕು. ಹೇಗೆಂದರೆ ಈ ದಿನ ಚಂದ್ರನ ಸಮೀಪದಲ್ಲಿರುವ ಒಂದು ನಕ್ಷತ್ರವನ್ನು ಗುರ್ತಿಟ್ಟುಕೊಂಡು ಮರುದಿನ ನೋಡಿದರೆ, ಚಂದ್ರನು ಆ ನಕ್ಷತ್ರದ ಸಮೀಪದಲ್ಲಿರದೆ ಅದಕ್ಕೆ ಪೂರ್ವದ ಕಡೆಗೆ ಸ್ವಲ್ಪ ದೂರ ಸಂಚರಿಸಿ, ಮತ್ತೊಂದು ನಕ್ಷತ್ರದ ಸಮೀಪದಲ್ಲಿ ಕಾಣಿಸುವನು. ಇದರಿಂದ ಚಂದ್ರನು ಸದಾ ಆಕಾಶ ಮಾರ್ಗದಲ್ಲಿ ಪೂರ್ವ ದಿಕ್ಕಿನ ಕಡೆಗೆ ಪ್ರಯಾಣ ಮಾಡುತ್ತಾನೆಂದು ಈ ಚಂದ್ರನ ತಿರುಗುವಿಕೆಯಿಂದ ನಮಗೆ ತಿಳಿಯುತ್ತದೆ. ಪ್ರತಿದಿನವೂ ಚಂದ್ರನ ಸಮೀಪದಲ್ಲಿರುವ ನಕ್ಷತ್ರಗಳನ್ನು ಗುರ್ತಿಟ್ಟುಕೊಳ್ಳುತ್ತಾ ಬಂದರೆ, ೨೭ ದಿವಸ ೮ ಘಂಟೆಗಳೊಳಗಾಗಿ ಚಂದ್ರನು ತಾನುಮೊದಲಿದ್ದ ನಕ್ಷತ್ರತದ ಸಮೀಪದಲ್ಲಿ ಕಾಣಿಸುವನು (ಮೊದಲಿದ್ದ ನಕ್ಷತ್ರಕ್ಕೆ ಸೇರಿದರೆ ೨೮॥ ದಿನಗಳಾಗುತ್ತವೆ) ಇದರಿಂದ ಚಂದ್ರನ ಆಕಾಶ ಮಾರ್ಗವು ಚಕ್ರಾಕಾರವಾಗಿದೆ, ಎಂದು ತಿಳಿಯುತ್ತದೆ. ಇದಕ್ಕೆ ಚಂದ್ರ ಕಕ್ಷೆ ಎಂದು ಕರೆಯುತ್ತಾರೆ. ಚಂದ್ರನು ಆಕಾಶದಲ್ಲಿ ಇಂಥಾ ಸಮಯದಲ್ಲಿ ಇಂಥಾ ನಕ್ಷತ್ರದ ಸಮೀಪದಲ್ಲಿರುವನೆಂದು ತಿಳಿದುಕೊಳ್ಳುವದಕ್ಕೋಸ್ಕರ ಚಕ್ರಾಕಾರವಾದ ಚಂದ್ರಕಕ್ಷೆಯನ್ನು ೨೭ ಸಮ ಭಾಗಗಳನ್ನಾಗಿ ಮಾಡಿ ಪ್ರತಿಯೊಂದು ಭಾಗವನ್ನು ಅದರ ಸಮೀಪದಲ್ಲಿರುವ ನಕ್ಷತ್ರದ ಹೆಸರಿನಿಂದಲೇ ಕರೆಯುತ್ತಾರೆ. ಅವುಗಳ ಹೆಸರುಗಳು ಈ ರೀತಿ ಇವೆ.

ಶ್ಲೋಕ– ಅಶ್ವಿನೀಭರಣೀ ಚೈವ ಕೃತಿಕಾ ರೋಹಿಣೀ ಮೃಗ ।
ಆದ್ರಾ ಪುನರ್ವಸೂ ಪುಷ್ಯಸ್ತಥಾ ಶ್ಲೇಷ ಮಘಾತಥಾ ॥
ಹಸ್ತ ಚಿತ್ರಾತಥಾ ಸ್ವಾತಿ ವಿಶಾಖಾ ತದನಂತರಂ ।
ಅನುರಾಧಾ ತತೋ ಜೇಷ್ಠಾ ತತೋ ಮೂಲಂ ನಿಗದ್ಯತೆ ॥
ಪೂರ್ವಾಷಾಢೋತ್ತರಾಷಾಢಾ ತ್ವಭಿಜಿಚ್ಛ್ರವಣ ಏವಚ ।
ಧನಿಷ್ಠಾ ಶತ ತಾರಾಖ್ಯಾ ಪೂರ್ವಾ ಭಾದ್ರ ಪದಾ ತತಃ ॥
ಉತ್ತರಾಭಾದ್ರ ಪಾಚ್ಚೈವ ರೇವತ್ಯೇ ತಾನಿ ಭಾನಿಚ ॥

ಟೀಕೆ– ಅಶ್ವಿನಿ, ಭರಣಿ, ಕೃತಿಕ, ರೋಹಿಣಿ, ಮೃಗಶಿರ, ಆರಿದ್ರ ಪುನರ್ವಸು, ಪುಷ್ಯ, ಆಶ್ಲೇಷ, ಮಘ, ಪೂರ್ವ ಫಲ್ಗುನಿ (ಹುಬ್ಬ) ಉತ್ತರ. ಹಸ್ತ, ಚಿತ್ತ, ಸ್ವಾತಿ, ವಿಶಾಖ ಅನುರಾಧ, ಜೇಷ್ಠ, ಮೂಲ, ಪೂರ್ವಾಷಾಢ. ಉತ್ತರಾಷಾಢ, (ಅಭಿಜಿತ್) ಶ್ರವಣ, ಧನಿಷ್ಠ, ಶತತಾರ, ಪೂರ್ವಾಭಾದ್ರ, ಉತ್ತರಾಭಾದ್ರ, ರೇವತಿ ಈ ೨೭ ನಕ್ಷತ್ರಗಳೇ ಚಂದ್ರನ ನಿತ್ಯ ನಕ್ಷತ್ರಗಳು.

ಇಂಥಾ ನಿತ್ಯ ನಕ್ಷತ್ರಗಳಿಗೆ ಮನುಷ್ಯಾದಿ ಪ್ರಾಣಿಗಳು ಆಧೀನವಿದ್ದುದರಿಂದ ಇವುಗಳ ಗುಣಕರ್ಮಗಳಿಗನುಸಾರವಾಗಿ ಮಾನವನು ಆಚರಿಸಲಿಕ್ಕೇ ಬೇಕು. ಮತ್ತು ಸದರೀ ನಕ್ಷತ್ರಗಳ ಗುಣಕರ್ಮಗಳಿಗನುಸಾರವಾಗಿ ಮಾನವನ ಜನನೋದಯದ ಫಲಾಫಲಗಳು ಜರುಗುತ್ತವೆ. ಆದ್ದರಿಂದ ಈ ೨೭ ನಕ್ಷತ್ರಗಳ ಗುಣ ಕರ್ಮ, ಇವುಗಳಲ್ಲಿ ಮಾಡತಕ್ಕಂಥ ಶುಭಾಶುಭ ಕಾರ್ಯಗಳ ವಿವರವನ್ನು ವಿವರವಾಗಿ ಮುಂದಿಕೊಡಲಾಗಿದೆ

# ಅಶ್ವಿನೀ ನಕ್ಷತ್ರದ ಗುಣಕರ್ಮಾದಿಗಳ ವಿವರ.

ಶ್ಲೋಕ:– ಅಶ್ವಿನ್ಯಾ ದೇವತೌ ಶ್ವೇತವರ್ಣೌ ತಾದ್ವಿ ಭುಜಾಸ್ತ್ಮನುಃ |
ಅಕ್ಷಮಾಲಾಃ ಸುಧಾಕುಂಭ ಧಾರಣಾವಶ್ವವಾಹನೌ ||

ಶ್ಲೋಕ— ಹಸ್ತ್ಯಶ್ವ ಬಂಧ ರಥ ಯಾನ ಪುರ ಪ್ರವೇಶ ಭೈಷಜ್ಯಮಂತ್ರ ಗ್ರಹಹರ್ಮ್ಯಸುರ ಪ್ರತಿಷ್ಠಾಃ || ಯಾತ್ರಾಭಿಷೇಕ ಮುಖದೀಕ್ಷಣ ಚೌಲಮೌಂಜೀಕ ಶಾಂತಿಪೌಷ್ಟಿಕವಿಧ ಸವಾಥ ಅಶ್ವಿನೀಷು||ಅಶ್ವಿನೀನಕ್ಷತ್ರಸ್ಯ ಅಶ್ವಿನೌದೇವತೇ, ಪ್ರಧಾನದೇವತಾ ಪೂಷಾಧಿದೇವತಾ| ಯಮ ಪ್ರತ್ಯಧಿದೇವತಾ| ನಕ್ಷತ್ರಗೋಳ ತ್ರಯಿಶಾ, ತುರಗಯೋನಿಃ ಕೃಷ್ಣವರ್ಣಾಭಿಮಾನಿೀ | ದೇವಗಣಃ | ವೈಶ್ಯಜಾತಿ | ಸ್ತ್ರೀ ಯ.ಬೀಜಂ, ಆರೋಗ್ಯಕರ, ಚತುಷ್ಪಾತ್, ತಿರ್ಯಙ್ಮುಖಮಂಡಲೋಚನಂ ಕ್ಷಿಪ್ರಕಾರ್ಯಂ ಪಾರ್ಶ್ವನಾಡೀ| ಪಾದರಜ್ಜು | ಮೇಷರಾಶಿ:| ಅಂಗಾರಕಗ್ರಹಃ| ಪಟ್ಟಣಸ್ಥಾನಂ ವಾಯು ಮಂಡಲಂ |ಕುಚಿಲ್ಲವೃಕ್ಷಃ| ಭೇರುಂಡಪಕ್ಷಿ |ಚಂದ್ರಸಮಾಕಷ್ಟ್ಯಾಯಾಂ ಪಂಚಾಶದ್ಘಟಿಕಾನಂತರಂ ಚತುರ್ಥ ಘಟಿಕಾಪರ್ಯಂತಂ ವಿಷೋತ್ಪತ್ತಿ:| ದ್ವಿಚತ್ವಾರಿಂಶದ್ಘಟಿಕೋಪರಿ ಚತುರ್ಘಟಿಕಾಪರ್ಯಂತಂ ಅಮೃತಸಮಯಃ || ಯಾತ್ರಾಯಾಂ ಮಾಷಭಕ್ಷಣೆ ಜಯಃ|| ಸರ್ವದಿಕ್ಷು ಪ್ರಯಾಣಂ ಶುಭಂ|| ಪುಂಜನನೇ ನವದಿನಾರಿಷ್ಟಂ| ಸ್ತ್ರೀಜನನೇತುನದೋಷಃ,ಅಸ್ಮಿನ್ ಅಶ್ವಿನೀನಕ್ಷತ್ರೇಜ್ವರಾದಿರೋಗೋತ್ಪತ್ತೌ ನವದಿನಾನಂತರಂ ಆರೋಗ್ಯಂ ಭವತಿ ಭಾನುವಾರಯುಕ್ತ ಅಶ್ವಿನೀನಕ್ಷತ್ರೆ ರೋಗೋತ್ಪತ್ತೌ ಪಂಚದಶದಿನಾನಂತರಂ ಆರೋಗ್ಯಂ ಸೋಮವಾರೆನವದಿನಾನಂತರಂ ಆರೋಗ್ಯಂ, ಭೌಮವಾಸರೆಏಕವಿಂಶದ್ದಿನಾನಂತರಂ ಮಾರೋಗ್ಯಂ ಬುಧವಾರೆದಶದಿನಾನಂತರಂ ಗುರುವಾಸರೆದ್ವಾದಶದಿನಾನಂತರಂ, ಭೃಗುವಾಸರೆತ್ರಿದಿನಾನಂತರಂ ಮಂದವಾರೆತ್ರಿಂಶದ್ದಿನಾನಂತರಂ, ಆರೋಗ್ಯಂಭವತಿ || ಅಥ ನಕ್ಷತ್ರ ಶಾಂತಿವಿಧಿ:||ಶ್ವೇತವಸ್ತ್ರಾಲಂಕಾರಭೂಷಿತಾ ಕಮಂಡಲುಧಾರಿಣೀ ಮನ್ಮೃತಹಸ್ತಾಂ ಯಮಳರೂಪಾಂ ದ್ವಿಭುಜಾಂ ಇಕ್ಷುರಸಪೂರ್ಣಕಲಶಧಾರಿಣೀಂ ಪುರುಷಾಕೃತಿಂ|ಅಶ್ವಿನಿದೇವತಾ ಪ್ರತಿಮಾಂಸೌವರ್ಣೀಂ ಆರಾಧಯೇತ್ || ಶ್ರೀಗಂಧಗುಗ್ಗುಲ ಸಿಲಾರಣ ಪಾಟಲವಸ್ತ್ರ ಕ್ಷೀರಾನ್ನಕುಳಿತ್ಥಪಕ್ಷತೈಃ ಅರ್ಚಯೇತ್|| ದೆವಸ್ಯತ್ವೇತಿ ಪ್ರಧಾನಮಂತ್ರ:| ದ್ವಿಶತೋತ್ತರ ಸಹಸ್ರಜಪ: | ನಕ್ಷತ್ರೇಷ್ವಿನ್ಮಹಾಶಾಂತೌ || ಲಘುಶಾಂತೌ ಪಿಪ್ಪಲಸ್ಯ ದಾನಂ| ವಿಷದುತ್ತರಣೀನೀಲಾಶ್ವಂ ದಕ್ಷಣಕರ್ಣೆ ಗೃಹೀತ್ಯಾದದ್ಯಾತ್|| ಯಥಾಕರಣಂ ಶಾಂತಿಕಲ್ಪೋಕ್ತ ಸಾರೇಣಹೋಮಃ || ಪೂರ್ವಾಹ್ಣೇ ನೈರುತ್ಯದೇಶೆ ಮಾಷಾನ್ನ ಬಲಿಹರೇತ್| ವಿಪ್ರಯುಗ್ಮಂಭೋಜಯೇತ್|| ಹಿರಣ್ಯಂದಕ್ಷಣಾ | ನವಾಹಾತ್ಪೂ ಮೀಜಪತೀ ಸಳಂಗಸಾರಂಸಘಸ್ರಮಾತ್ರಯಾ ಮಾಷಪರಿಮಿತಯಾವಿರಚಯೇತ್ || ಮುಷ್ಟಿಸಾರಣ ಸರ್ಪವಿಷನಿಃತೇನ ವಿಷನ್ನಿವರ್ತಿ: | ಕ್ಲೀಬತ್ವಪರಿಹಾರಶ್ಚ||ತುರುಗಖುರಪತ್ರಲೇಪೇನ ಕುಷ್ಠನಿವರ್ತಿ: || ಮುಷ್ಟಿಮೂಲಗಂಧಲೇಪೇನ ಚರ್ಮರೋಗನಿವರ್ತಿ: ಸ್ಫೋಟಪೂರೀಷಸತ್ವ ಸನ್ನಿಪಾತಜಯಃ||ತಸ್ಯರಸೇನ ಶ್ವೇತವಾತಯಾತನಾನಿವರ್ತಿಃ, ಕುಳಿತ್ಥರಸಾನ್ನ ಪಥ್ಯೇನ ಕಾಮಿಲಾದಿ ಶೀತಪೈತ್ಯಪರಿಹಾರಂ | ಖರ್ಜೂರವರ್ಜಂ, ಹಿಂಗ ಸೇವನೆ ವಾತಶೂಲನಿ

ವರ್ತಿಃ || ಸೂರಣೆಗುಡಕೇಅನಿವರ್ತಿಃ| ಶಸ್ತ್ರಚಿಕಿತ್ಸಾಯಾಂಪಾದಮಂಡಲೆ ವ್ರಣಜಯಃ| ಅಶ್ವಗಂಧಾದಿರಸಾಯನೇನಮೋಹಪಿತ್ತಕ್ಷಯನಿವರ್ತಿಃ,ಭೃಂಗಾಮಲಕತೈಲೇನನೇತ್ರರೋಗ ಪರಿಹಾರಃ,ನೀಲರಸೇನೇಕ್ಷಣೆ ಪಟಲಚ್ಛೇದಃ| ಕಾಚಿಕಾರಸೇನ ದಾತ್ರಾಂಥಾರೋಗ್ಯಂ| ಪುನರ್ನವಾದಿಕಜ್ಜಲೇನ ನೇತ್ರದೃಷ್ಟಿ ಪ್ರಸಾರಃ, ರಸಸಾಧನೆ ಮಂಡಲಾತ್ಸಿದ್ಧಿಃ || ಗಂಧಕಸಾಧನ ತ್ರಯನಂ. | ತಾಳಕಬುದ್ಧ್ವತ್ಸರ್ಕ || ವಿಷಪಾಷಾಣಾದೀನಾಮಮೃತೀಕರಣೆ ಪ್ರಶಸ್ತಂ || ನವಲೋಹ ಭಸ್ಮಾನಿ ದಿವಾಯಂತ್ರ ಮಂತ್ರಾದೀನಾಂ ರಾತ್ರಿಃ ಪ್ರಶಸ್ತಾ| ಚಿಕಿತ್ಸಾರಂಭ ಪ್ರಾತರೇವ || ವಿದ್ಯಾಭ್ಯಾಸೆ ಝಡತಿ ಜ್ಞಾನೋತ್ಪತ್ತಿ | ಮುರಳಿ ಸಾಧನಕಾಯ ಕಾರ್ಶ ಕಾಠಿಣ್ಯಂ ಗಾನ ಸಾಧನೆ ಸ್ವರಭಂಗ. ನಿಷೇಕೆ ಪ್ರಥಮ, ಗರ್ಭಸ್ರಾವ, ನಿಕ್ಷೇಪೋತ್ಪಾತನೆ ಆಕಸ್ಮಿಕ ರೋಗೋತ್ಪತ್ತಿ, ನಿಧ್ಯಂಜನೌಷಧಗ್ರಹಣೆ ಕ್ಷಿಪ್ರಸಿದ್ಧಿಃ || ಮಂತ್ರ ಜಪಾರಂಭತ್ವೆ ವಿಘ್ನಂ | ಚೌರ್ಯ ಶಿಕ್ಷಣಂ || ನಷ್ಟದ್ರವ್ಯ ವಿಷಯಕ ಪ್ರಯತ್ನೇ ದಿನತ್ರಯಂ ದೃಶ್ಯತೆ | ಗೃಹಾರಂಭೇ ಕ್ಷಿಪ್ರಪೂರ್ತಿರ ನಾಮಯ ಭಂಗಶ್ಚ || ಶಿಲ್ಪೋತ್ಸವಾಘಾತಃ | ಕೂಪಾದೌ ಶೋಷಣಂ | ರಸವಾದೆ ಭೈಷಜ್ಯ ಲಾಭ ಗುರ್ವಿಣಿವೇದಾನಾಯಾಂ ಶೀಘ್ರಂ ಸುಖಪ್ರಸವಂ ಪಶು ಸಂಗ್ರಹಣೆತ್ವನಾಮಯಃ || ಶಕಟ ಯಾತ್ರಾಯಾಂ ಲಾಭಃ | ವಾಣಿಜ್ಯೇ ಜೀವನ ಮಾತ್ರಪ್ರಾಪ್ತಿಃ | ಯುದ್ಧಾರಂಭ ವಿವಾದೇಜೋ ಭಯೋತ್ಸಂಧಿ ಅಶ್ವಗ್ರಹಣೇ ಭಾಗ್ಯೋದಯಂ || ಸ್ತ್ರೀ ಸಂಗ್ರಹಣೆ ರೋಗಪ್ರದಂ| ರತ್ನಕ್ರಯೇಚಿರೇಣ ಕಿಂಚಿಲ್ಲಾಭ ಧಾನ್ಯ ವಿಕ್ರಯಣೆ ಸದ್ಯೋಲಾಭ ವಸ್ತ್ರ ವಿಕ್ರಯ ಣೆ ಮಧ್ಯಲಾಭ || ಚತುಷ್ಪದಾದಿ ಪಶು ವಿಕ್ರಯಣೆ ಬಹುಲಾಭ | ದಾರು ವಿಕ್ರಯೇ ತಾಮಸಾದಲ್ಪಲಾಭ || ಬೀಜವಾಪೆ ಫಲಕಾರ್ಯಂ, ನೂತನ ವಸ್ತ್ರಧಾರಣೆ ಚಿರಾಯು | ಕ್ಷೌರೇತ್ವಪಮೃತ್ಯು ಪರಿಹಾರಂ ಅಭ್ಯಂಜನೆ ಬಲಾಧಿಕ್ಯಂ || ದೂರಯಾತ್ರಾಯಾಂಕ್ಷಿಪ್ರಾಗಮನಂ ! ಆಗಮನಪ್ರಶ್ನೆ ದಿನತ್ರಯೆವಾರ್ತಾ ಶ್ರವಣಂ|| ಸಂತಾನ ಪ್ರಶ್ನೆ ಸಾವಕಾಶೇನ ಸಿದ್ಧಿ | ಮರಣ ಸಂಶಯೇ ಜೀವತಿ, ರಾಜಕೋಪೇ ದುರ್ಗಸಂಕಟ ಪರಿಹಾರ, ಅಪರಾಧೇನಿಜ ಬಂಧನಂ || ಸನ್ಯಾಸೇ ಕ್ಷಿಪ್ರಮನಾಯಾಸೇನ ಮರಣಂ | ಋಣ ಗ್ರಹಣೆ ಕ್ಷಿಪ್ರನಿವರ್ತಿ ಪಿಶಾಚಾ ವೇಶೆಕ್ಷಿಪ್ರ ವಿಮೋಚನಂ || ಅಯಸ್ತಾಪೆ ಅಗ್ನಿ ಭಯಂ ಪಾಷಾಣ ಭೇದನೆ ರಕ್ತ ದರ್ಶನಂ || ಸುಧಾಭಾಂಡಾದಿದಃ ಕ್ಷೇಮಂ | ಗಂಧಂಗಾಲಾದಿ ಪೇಷಣತ್ವಭಯಂ || ತನ್ನವಾಯ ಕ್ರಿಯಾರಂಭೇ ಫಲಕರ: | ನಾಟ್ಯಾರಂಭೇ ಧನಹಾನಿ ನಾಪಿತಕ್ರಿಯಾರಂಭೇ ಧನಾಪ್ತಿಂ || ಪಶ್ವಾಲಭನೆತಂತ್ರಲೋಪ | ಮಂತ್ರ ವೈಕಲ್ಯಂಚ ಮೂರ್ತಿಗ್ರಹಣೇ ಜನವಿರೋಧ||ಮುದ್ರಾಧಾರಣೆತ್ವಧಿಕಾರಭಂಗ| ಮೈತ್ರಿಕರಣೆರ್ಝಟಿತಿ ಫಲಂ | ದ್ರವ್ಯ ನಿಕ್ಷೇಪೇ ಹಾನಿ || ಶಪತೆ ಸಿದ್ಧಿ ವ್ರತಾರಂಭೇ ನಿರ್ವಿಘ್ನೇನ ಸಮಾಪ್ತಿ || ಆರಾಮಕ್ರಿಯಾಯಾಂ ಅನ್ಯಾಕ್ರಾಂತತಾ | ದೋಹಳಂ ಫಲಕರಂ ಭವತಿ || ಗವೆಷಣೆತ್ವಿಷ್ಟ ಸಿದ್ಧಿ ಯಂತ್ರಧಾರಣೆತ್ವನಿಷ್ಟನಿವರ್ತಿಃ ||

ಆದಿತ್ಯವಾರೆ ನಂದನಯೋಗ ಸೋಮವಾರೆ ಶುಭಯೋಗ ಭೌಮವಾರೆ ಅಮೃತ ಅಮೃತಸಿದ್ಧಿಯೋಗ ಬುಧವಾರೆ ಮೃತ್ಯುಯೋಗ ಗುರುವಾರೆ ಶೂಲಯೋಗ ಶುಕ್ರವಾರೆ ಶುಭಯೋಗ ಶನಿವಾರೆ ನಿರ್ಜೀವ ಯೋಗ ಅಮಾಯಾಂ ಅಗ್ನಿಯೋಗ ಸಪ್ತಮ್ಯಾಂ

ಮಹಾಯೋಗ ಅಶ್ವಿನೀ ಸ್ಥಿತೇಚಂದ್ರಮಸಿ ಪೂರ್ವಫಲ್ಗುನೀ ಸ್ಥಿತೇಕ್ರೂರಗ್ರಹೇ ಮಹಾಶೂಲಯೋಗಃ|| ಮಧ್ಯಾಹ್ನೇರಕ್ತಮೇಘದರ್ಶನೇವೃಷ್ಟಿ, ಚೈತ್ರಮಾಸೇ ಯಾಸ್ಯನಕ್ಷತ್ರೇಂಭವತಿ || ಉತ್ಪಾದದರ್ಶನೇ ವಾಯುವೃದ್ಧಿ|| ಸಂಕ್ರಮೆ ಪ್ರತಿಪತ್ಸು ಹಿತಮಧ್ಯಾಹ್ನ|| ಪ್ರಥಮರಜಸ್ವಲಾ ಸೌಭಾಗ್ಯಶೀಲಿನೀ || ಪುತ್ರವತೀಚಭವಿಷ್ಯತಿ ||

ಸ್ತ್ರೀ ಸಂಭೋಗ. ಜಾತಕರ್ಮ,ನಾಮಕರಣ, ಅನ್ನಪ್ರಾಶನ, ಚೌಲೋಪನಯನ ಅಕ್ಷರಭ್ಯಾಸ ವೇದಶಾಸ್ತ್ರಾರಂಭ ತೈಲಾಭ್ಯಂಗ ನವವಸ್ತ್ರಾಭರಣ ಛತ್ರ ಚಾಮರಾಂದೋಳನ ಗಜಾಶ್ವಾರೋಹಣ ವಾಸ್ತುಕರ್ಮ ಚಿತ್ರಲೇಖನ ಭೂಕರ್ಷಣ ಬೀಜಾವಾಪಕದಳೀ ನಾರೀಕೇಳವೃಕ್ಷಸ್ಥಾಪನಾ ಯಾತ್ರಾ ಯುದ್ಧ ಭದ್ರವ ಕರಣ ವೈದ್ಯಚಿಕಿತ್ಸಾದಿ ರಾಜ ದರ್ಶನಾದಿ ಶುಭಕಾರ್ಯೇಷು ಅಶ್ವಿನೀಶಸ್ಯತೇ || ಅಶ್ವಿನ್ಯಾಂ ಸ್ತ್ರೀಯುಗ್ಮ ಜನನೇ ಮಾತೃಗಂಡ | ಪುಂ ಯುಗಳಂ ಜನನೆ ಪಿತೃಗಂಡಂ| ಸ್ತ್ರೀ ಪುಂ ಜನನೆ ತ್ವನ್ಯತರ ಶಿಶುಹಾನಿ ||

ಅಶ್ವಿನಿ ನಕ್ಷತ್ರೆ ಜಾತ ಪುರುಷಃ ದೀರ್ಘಬಾಹು ವಿಶಾಲಾಕ್ಷ ರಾಜಪ್ರಾಜ್ಞ ಸುಭಾಷಿತ ಸುರೂಪಸ್ಸುಭಗಸ್ಸೂಕ್ಷ್ಮ ನಖರಸ್ನಾಹಸೀಭೀಷಕ || ಜೋರೋದ್ವಾಸಹಮಾನೀಚ ದುರಾಚಾರೋ ದುರನ್ನಭುಕ್ | ದಯಾಶೂನ್ಯೋರ್ಥಲುಬ್ಧಶ್ಚ ದಾಂಬಿಕಸ್ವರವಂಚಕ | ಮಿಥ್ಯಾವಾದೀ ಗೂಢಪಾಪ ಪಂಡಿತ ಪರಕಾರ್ಯಕೃತ್ || ಧೈರ್ಯವಾನ್ ಮತಿಮಾನ್ ಯೋಗೀ ಪಾಚಕೋಲ್ಪಾಶನಸ್ಸುಖೀ | ಅಂಗದಶ್ಚಲಚಿತ್ತಶ್ಚ ಪ್ರಮಾಸಿ ಕಟಿಚಿಹ್ನಿತ || ಸ್ಥಿರಾರಂಭೋದೀರ್ಘದರ್ಶಿ ಪರಸ್ತ್ರೀ ಗಮನಾತುರ | ಪರಾಧೀನಶ್ಚ ಬಲವಾನ್ ಅಶ್ವಿನ್ಯಾಂ ಜಾಯತೆ ನರಃ || ಪ್ರಥಮ ಪಾದೆತಸ್ಯರಾಶಿ | ಕುಜಧಾತೃತ್ವಗ್ನಿ ಪ್ರಹರಣ ಸಾಹಸವಾನ್ | ಪಿಶುನಸ್ಸರ್ವ ರತ || ದ್ವಿತೀಯಪಾದೆ ಭೋಗ್ಯಾಂಶಸ್ಯ ಶುಕ್ರ ಧಾರ್ಮಿಕ ತೇಜಸ್ವಿ | ಧನ ಧಾನ್ಯ ಸಮೃದ್ಧತ || ತೃತೀಯ ಚರಣೆ ನಿಜಕ್ಷೇತ್ರಾಂಶಸ್ಯ ಬುಧ ಉತ್ಪನ್ನ ಭಕ್ಷಕ | ಬಹು ವಿದ್ಯಾವಾನ್ ಭೋಗೀ ಚಿಂತಾಕುಲ ವಿವಾದಜಯಿಶಲಹ ಶೂರ || ಚತುರ್ಥ ಪಾದೆ ಧನಾಂಶಸ್ಯ ಚಂದ್ರ ದೇವಪೂಜಾಪರ, ಧರ್ಮಕರ್ತಾ ಸ್ತ್ರೀ ಪ್ರಸದ್ಭವತಿ || ಅಶ್ವಿನೀದಿವಿಜಾತೋ ಬಲವಾನ್, ಅಮಾಯಾಂ ಅಶ್ವಿನ್ಯಾಂ ಸಂಭವಸ್ಯ ರಾಜಯೋಗೋ ಭಂಗಶ್ಚ ಗುರೌ ಚಂದ್ರಯುಕ್ತೆ ರಾಜಾಧಿಕಾರ ಜೀವನಂ || ಶುಕ್ರ ಕುಜಯೋಗೇ ಕಳತ್ರಭಂಗ | ಬುಧ ಶುಕ್ರಯೋಗೇ ಸ್ತ್ರೀ ಮೂಲ ಕರುಣಾಧಿಕ್ಯಂ||ಗುರು ಶನಿಯೋಗೇ ರಾಜಮಹಿತುಲ್ಯ | ರವಿ ಶನಿಯೋಗೇ ಜನವಿರೋಧೋಧಿಕಾರ ಲಾಭಶ್ಚ || ಕುಜ, ಬುಧ, ರಾಹುಯೋಗೇ ರೋಗಪೀಡಿತಃ | ಶುಕ್ರ, ರವಿ, ರಾಹುಯೋಗೇ ತಸ್ಯಿತಃ ಕಳತ್ರಸ್ಯ ವಾ ನೇತ್ರರೋಗ ಚಂದ್ರೋಪರಾಗೆ ಶೃಂಗಹಾನಿ || ಸಿಂಹಂಗಾರಕೆ ‐ಅಶ್ವಿನ್ಯಾಂ ಜಾತಸ್ಯ ಪುತ್ರ ಶೋಕಪ್ರಾಪ್ತಿ | ವ್ಯಾಳದ್ರೇಕ್ಕಾಣೆ ಕುಜಶ್ಚ ಸರ್ಪ ಗಂಡಃ || ಗುರು ದೃಷ್ಟ್ಯಾ ತತ್ಪರಿಹಾರ || ಶುಕ್ರದಶಾ ಕ್ರೂರ ಶುಕ್ರಯುಕ್ತೋ ರಾಹು ಮಾರಕ ಸ್ತ್ರೀಧನ ಮೂಲಾದಪಮೃತ್ಯು | ಅಶ್ವಿನ್ಯಾದೌಘಟಿಕಾದ್ವಯ ಜನನೆ ಅಭುಕ್ತ ಗಂಡ | ಚಂದ್ರೋಪರಾಗೆ ಬಾಲಾರಿಷ್ಟ || ಅಶ್ವಿನೀ ಜಾತಸ್ಯ ಪ್ರಥಮಾಬ್ದೆ ಅಗ್ನಿಚಿಕಿತ್ಸಾದಾ| ದ್ವಿತಿಯಾಬ್ದೆ ಜ್ವರ || ತೃತೀಯಾಬ್ದೆ ಕುಕ್ಷಿಶೂಲ || ಚತುರ್ಥ,ಪಂಚಮೆ ವಾಕ್ಷಿಪೀಡಾ ಷಷ್ಠಸಪ್ತಮೇವಾ ಧನನಾಶಃ | ದಶಮೆ ವಿಂಶತಿತಮೆ ಅಪಮೃತ್ಯು || ಚತ ವಿಂಶ್ಯಬ್ದೆ|| ಮೃಗಭಯಂ | ಚತ್ವಾರಿಂಶದಬ್ದೆ ವ್ಯಾಧಿ || ಚತುಷಷ್ಠಿತಮೇವತ್ಸರೇ ಮಹಾವ್ಯಾಧಿ ||

ಟೀಕ— ಅಶ್ವಿನಿ ನಕ್ಷತ್ರದ ವಿವರ– ಈ ಅಶ್ವಿನಿ ನಕ್ಷತ್ರದಲ್ಲಿ [ಪಂಚಾಂಗದಲ್ಲಿ ಎಷ್ಟು ಸಮಯದವರೆಗೆ ಇರುವುದೋ ಅಷ್ಟು ಸಮಯದ ವರೆಗೆ] ಆನೆ, ಕುದುರೆ ಮೊದಲಾದವುಗಳನ್ನು ಖರೀದಿ ಮಾಡುವುದು, ರಥ, ವಾಹನ, ಬಂಡಿ, ವೇಣ, ಪಾಲಕಿಗಳನ್ನು ಹೊಸದಾಗಿ ತರುವುದು, ಊರಿಗೆ ಒಕ್ಕಲು ಹೋಗುವುದು, ರೋಗಕ್ಕೆ ಚಿಕಿತ್ಸೆ ಔಷಧ ಕೊಡುವುದು, ಮಂತ್ರೋಪದೇಶ, ಮನೆ, ಮಾಹಡಿ, ಕೆರೆ, ಕೆಂಠೆ. ಭಾವಿಗಳನ್ನು ಕಟ್ಟಿಸುವುದು, ಪ್ರಯಾಣ. ಪಟ್ಟಾಭಿಷೇಕ, ಯಜ್ಞದೀಕ್ಷೆ, ಪುಣ್ಯತೀರ್ಥಗಳ ಯಾತ್ರೆ ಉಪನಯನ, ಶಾಂತಿಕರ್ಮ, ಕುಸ್ತಿ, ಕಸರತ್ತುಗಳನ್ನು ಮಾಡಲು ಶುಭಕರವಾದದ್ದು ಈನಕ್ಷತ್ರಕ್ಕೆ ಅಶ್ವಿನಿ ದೇವತೆಗಳು, ಪೂಷಾನಾಮ ಅಧಿದೇವತೆ. ಯಮನುಪ್ರತ್ಯಧಿದೇವತ,ಚು,ಚೆ,ಚೊ,ಲಾಎಂಬ ನಾಲ್ಕುಅಕ್ಷರಗಳು ಕುದುರೆಯಆಕಾರವುಳ್ಳ ಮೂರು ಚುಕ್ಕೆಗಳು. ಕೃಷ್ಣವರ್ಣಕ್ಕೆ ಅಭಿಮಾನಿ, ದೇವಗಣ, ವೈಶ್ಯಜಾತಿ, ಕ್ಷತ್ರಿಯಬೀಜ ಆರೋಗ್ಯಕರ– ನಾಲ್ಕುಪಾದಗಳು, ಅಡ್ಡಡ್ಡವಾದ ಮುಖ, ದೃಷ್ಟಿಮಂದ, ಕ್ಷಿಪ್ರಸಂಜ್ಞ ಪಾರ್ಶ್ವಗ ನಾಡಿ, ಪಾದರಜ್ಜು. ಮೇಷರಾಶಿ, ಕುಜ (ಅಂಗಾರಕ) ಅಧಿಪತಿ, ವಾಯುಮಂಡವೆ ಪತ್ತನಸ್ಥಾನ, ಮುಷ್ಟಿವೃಕ್ಷ ಭೇರುಂಡಪಕ್ಷಿ, ಈನಕ್ಷತ್ರದಲ್ಲಿ ೫ಗಳಿಗೆಗಳ ನಂತರ ವಿಷ ಗಟನೆಗಳು, ೪ಗಳಿಗೆಗಳ ತರುವಾಯ ಅಮೃತ ಸಮಯ. ಯುದ್ಧ ಪ್ರಯಾಣ ಕಾಲದಲ್ಲಿ ಉದ್ದಿನ ದಿನಸನ್ನು ತಿಂದು ಯಾವ ದಿಕ್ಕಿಗೆ ಹೋದರೂ ಶತೃ ಜಯ, ಮಂಗಲವಾರ್ತೆ,ಈ ನಕ್ಷತ್ರದಲ್ಲಿ ಗಂಡುಕೂಸು ಹುಟ್ಟಿದರೆ ೯ ದಿನಗಳವರೆಗೆ ಅನಿಷ್ಟ ಹೆಣ್ಣುಹುಟ್ಟಿದರೆದೋಷವಿಲ್ಲ ಕೆಲಸರ ಮತದಂತೆದೋಷಜ್ವರಾದಿ ರೋಗಗಳಿಗೆ ೯ ದಿನದತರುವಾಯ ಗುಣವಾಗುವುದು. ಭಾನುವಾರ ಅಶ್ವಿನೀನಕ್ಷತ್ರವಿದ್ದದಿವಸ ಖಾಯಿಲೆಹುಟ್ಟಿದರೆ, ೧೫ ದಿನಗಳ ನಂತರ ಗುಣವಾಗುತ್ತದೆ, ಸೋಮವಾರ ವಾದರೆ ೯ದಿನಗಳ ನಂತರ ಗುಣವಾಗುತ್ತದೆ, ಮಂಗಳ ವಾರವಾದರೆ ೨೧ ದಿನಗಳ ನಂತರ ಗುಣವಾಗುತ್ತದೆ. ಬುಧವಾರವಾದರೆ ೧೦ ದಿನಗಳ ನಂತರ ಗುಣವಾಗುತ್ತದೆ. ಗುರುವಾರವಾದರೆ ೧೨ ದಿನಗಳನಂತರ ಗುಣವಾತ್ತದೆ ಶುಕ್ರವಾರವಾದರೆ ೩ ದಿನಗಳನಂತರ ಗುಣವಾಗುತ್ತದೆ ಶನಿವಾರವಾದರೆ ೩೦ ದಿನಗಳ ನಂತರ ಗುಣವಾಗುತ್ತದೆ. ಈ ನಕ್ಷತ್ರಕ್ಕೆ ಭಂಗಾರದ ಅಶ್ವಿನಿ ದೇವತಾಪ್ರತಿಮೆಯನ್ನು ಮಾಡಿಸಬೇಕು. ಅದಕ್ಕೆ ಕೈಯಲ್ಲಿ ಕಮಂಡಲ, ಅಮೃತ ಹಸ್ತ, ಯಮುಳಾಕಾರ ಎರೆಡು ಭುಜಗಳು, ಇಂತಹ ಪ್ರತಿಮೆ ಮಾಡಿಸಿ ಬಿಳಿಯ ವಸ್ತ್ರಾಭರಣ, ಶ್ರೀ ಗಂಧಗಗ್ಗುಲ, ಕಪ್ಪು, ಕೆಂಪು ಮಿಶ್ರದಪಾಟಲ ವಸ್ತ್ರಗಳಿಂದ ಅಲಂಕರಿಸಿ ಹಾಲು, ಅನ್ನ, ಹುರುಳಿ ಅಕ್ಷತೆಗಳಿಂದ ಪೂಜೆಯಂ ಮಾಡಿ, ದೇವಸ್ಸಕ್ಮಾ ಎಂಬ ದೇವರ ಮಾತ್ರವನ್ನು ೧೦೦೦ಸಾರೆ ಜಪಮಾಡಬೇಕು. ನಕ್ಷತ್ರೇಷ್ಟಿಯಲ್ಲಿ ಹೇಳಿದ ಮಹಾಶಾಂತಿ, ಮತ್ತು ಲಘುಶಾಂತಿಯಲ್ಲಿ ಹಿಟ್ಟಿನ ಕುದುರೆಯನ್ನು ದಾನಮಾಡಬೇಕು. ವಿಪತ್ಪರಿಹಾರಕ್ಕಾಗಿ ಕರಿಬಣ್ಣದ ಕುದುರೆಯ ಬಲಗಿವಿಯನ್ನು ಹಿಡಿದು ವಿಧಿಪ್ರಕಾರ ಹೋಮಮಾಡಿ ಪ್ರಾತಃಕಾಲದಲ್ಲಿ ನೈಋತ್ಯದಿಕ್ಕಿನಲ್ಲಿ ಉದ್ದಿನ ಪಡಿಯನ್ನದಿಂದ ಬಲಿಹಾಕಬೇಕು. ಜಂಗಮರಿಗೆ (ಬ್ರಾಹ್ಮಣರಿಗೆ) ಭೋಜನಮಾಡಿಸಿ ಸುವರ್ಣದಕ್ಷಿಣೆ ಸಹಿತ ದಾನಕೊಟ್ಟಲ್ಲಿ ಒಂಬತ್ತು ದಿನಗಳಿಗೆ ಸುಖವುಂಟಾಗುವುದು. ಶಂಖಭಸ್ಮವನ್ನು ಸೇರಿಸಿ, ಉದ್ದಿನಕಾಳಿನಷ್ಟು ಮಾತ್ರೆಯನ್ನು ಮಾಡಿಕೊಟ್ಟರೆ

ಜ್ವರನಾಶವಾಗುವುದು. ಅಶ್ವಗಂಧಚೂರ್ಣವನ್ನು ಕೊಟ್ಟರೆ ದೇಹಾರೋಗ್ಯನಾಗುತ್ತದೆ ವಿಷಮುಟ್ಟಿದ ಮರದ ಚಕ್ಕೆಯುಗಂಧವನ್ನು ಸಾಸಿವೆಕಾಳಿನಷ್ಟು ತೆಗೆದುಕೊಂಡರೆವಿಷನಾಶ ಷಂಢತ್ವ [ ನಪುಂಸಕತ್ವ ] ಪರಿಹಾರ ವಾಗುವುದು. ಕುದುರೆಯ ಗೊರಸಿನ ರಸದ ಲೇಪ ನದಿಂದ ಕುಷ್ಠ ರೋಗ ಪರಿಹಾರ ವಾಗುವುದು. ಮುಷ್ಟಿ ಗಿಡದ ಬೇರಿನ ಗಂಧವನ್ನು ಬಳಿ ದರೆ ಕಜ್ಜಿ,ಹುರುಕು,ಇಸುಬು ಮೊದಲಾದ ಚರ್ಮರೋಗಗಳು ಪರಿಹಾರವಾಗುವವು. ಕು ದುರೆಯ ಲದ್ದಿ ರಸದಿಂದ ಸನ್ನಿಪಾತ, ವಾತ್ತ ಆದರ ಶಾಖವನ್ನು ಕೊಡುವುದರಿಂದ ಶೀತ ವಾಯು ರೋಗ ನಿವಾರಣೆಯಾಗುವುದು. ಕಾಮಾಲೆ, ಮೊದಲಾದ ಶೀತ ಚಿಕಿತ್ಸೆ ರೋಗಗ ಳಿಗೆ ಹುರಳಿಯ ಸಾರು ಅನ್ನ ಪಥ್ಯದಿಂದ ನಿವಾರಣೆ ಬಾಯಿ ರೋಗಕ್ಕೆ ಖರ್ಜೂರವನ್ನು ಬಿಟ್ಟು ಹಿಂಗನ್ನು ಸೇವಿಸುವುದರಿಂದ ಪರಿಹಾರ, ಚೂರಣದಗಡ್ಡೆಯಿಂದ ಆಸನದ ರೋಗ ಹೋಗುವುದು ಶಸ್ತ್ರ ಚಿಕಿತ್ಸೆ ಮಾಡಿದರೆ ಪಾದಮಂಡಲದಲ್ಲಿ (೧೨ ದಿನಗಳಲ್ಲಿ) ಗಾಯ ಮಾಯುವುದು. ಅಶ್ವ ಗಂಧ [ಹಿರೆಮದ್ದಿನಬೇರು] ಮೊದಲಾದ ರಸಾಯನದಿಂದ ಪಿತ್ಥ ರೋಗ ಗುಣವಾಗುತ್ತದೆ ಭೃಂಗಾಮಲಕ ತೈಲದಿಂದ ನೇತ್ರ ರೋಗ ನಿವಾರಣೆ ಸೀಲಿಯ ರಸದಿಂದ ಕಣ್ಣಿನ ಪರಿಹೋಗುವುದು. ಕಾಚಿನ ಸೊಪ್ಪಿನ ರಸಲೇಹದಿಂದ ರಾತ್ರಿಯಕುರು ಡು, ನಾಶವಾಗುವುದು ಬಿಳಿಯ ಕೊಮ್ಮೆಬೇರು ಮೊದಲಾದವುಗಳಿಂದ ಕಾಡಿಗೆ ಮಾಡಿ ಕಣ್ಣಿಗೆ ಹಚ್ಚಿಕೊಂಡರೆ ದೃಷ್ಟಿ ಚುರುಕಾಗುವುದು. ಪಾದರಸವನ್ನು ಸಾಧನೆ ಮಾಡಿಕೆ ಮಂಡಲಕಾಲ(೪೮ ದಿನ)ದಲ್ಲಿ ಸಿದ್ಧಿಯಾಗುದು. ಗಂಧಕಸೇವನೆಯು ಆಯನದಲ್ಲಿ (೬ ತಿಂ ಗಳಲ್ಲಿ ) ಸಿದ್ಧಿಸುತ್ತದೆ ತಾಳಕವನ್ನು ಶುದ್ಧಿ ಮಾಡಿದರೆ ಒಂದು ವರ್ಷಕ್ಕೆ ಶುದ್ಧಿ, ವಿಷಹಾ ಷಾಣಾದಿಗಳನ್ನು ಶುದ್ಧಿ ಮಾಡಿ ಅಮೃತವಾಗಿ ಮಾಡುವುದಕ್ಕೆ ಉಷಾಃ ಕಾಲವುಶ್ರೇಷ್ಠ ೯ ಬಗೆಯ ಲೋಹದ ಭಸ್ಮ ಹಗಲು ಸಮಯ, ಯಂತ್ರ ಮಂತ್ರ, ತಂತ್ರಾ ದಿಗಳಿಗೆ ರಾತ್ರಿಸಮಯ ಪ್ರಶಸ್ಥ ವೈಶ್ಯಚಿಕಿತ್ಸೆಮಾಡುವದಕ್ಕೆ ಪ್ರಾತಃಕಾಲ ಉತ್ತಮ. ವಿದ್ಯಾಭ್ಯಾಸ ಪ್ರಾರಂಭಿಸಲು ಜ್ಞಾನೋತ್ಪತ್ತಿಯಾಗುವುದು ಗರಡಿ ಸಾಧನೆಗೆ ಉತ್ತ ಮ. ಸಂಗೀತ ಪ್ರಾರಂಭಿಸಿದರೆ ದೇಹವು ಕೆಡುವುದು ನಿಷೇಕಕಾರ್ಯಮಾಡಿಕೊಂಡರೆ ಪ್ರ ಥಮಗರ್ಭಅನಿಷ್ಠ. ನಿಧಿ ನಿಕ್ಷೇಪವನ್ನು ತೆಗೆದರೆ ಆಕಸ್ಮಿಕರೋಗ. ನಿಧ್ಯಂಜನ ವಾಗುವಷ್ಟ ಷಧಿಮೂಲಿಕೆಯನ್ನು ತಂದರೆ ಬೇಗಸಿದ್ಧಿ. ಮಂತ್ರೋಪದೇಶ ಮಾಡಿಕೊಂಡು ಜಪಕ್ಕಾ ರಂಭಿಸಿದರೆ ಕೂಡಲೆ ಸಿದ್ಧಿಯಾಗುವುದು ಕಳ್ಳತನ ಮಾಡಿದ ರೆಶೀಘ್ರತಪ್ಪದು ಕಳೆದುಕೊಂಡ ವಸ್ತುವು ೨ ದಿನಗಳಲ್ಲಿ ಸಿಗುವುದು. ಮನೆಕಟ್ಟಿದರೆ ರೋಗಾದಿಗಳು ಹೋಗುವದಿಲ್ಲ,ಶಿ ಲ್ಪಿಕಾರ್ಯವನ್ನು ಮಾಡಿಸಿದರೆ ನಿರ್ವಿಘ್ನವಾಗುವುದು. ಭಾವಿ ಮೊದಲಾದ ಜಲಾಂಶಗಳ ನ್ನು ಮಾಡಿಸಕೂಡದು. ರಸಾಯನ ಹಾಗೂ ವೈದ್ಯಶಾಸ್ತ್ರವು ಸಿದ್ಧಿ. ಗರ್ಭಿಣಿ ಸ್ತ್ರೀಯಳು ಪ್ರಸವವೇದನೆಯುದಿದ್ದರೆ ಕೂಡಲೆಜನನವಾಗುವಳು.ಪಶುಗಳಕ್ರಯಕ್ಕೆಉತ್ತಮಬಂಡಿಯಲ್ಲಿ ಪ್ರಯಾಣಮಾಡಿದರೆಲಾಭ. ವ್ಯಾಪಾರಪ್ರಾರಂಭಿಸಿದರೆ ಜೀವನಕ್ಕೆಲಾಭ.ಯುದ್ಧ ವಿವಾದ ಮಾಡಿದರೆ ಸಮಾಧಾನವಾಗು,ವದು ಅಥವಾಸಂಧಿ. ಕುದು ರೆಕೊಂಡರೆಭಾಗ್ಯಪ್ರಾಪ್ತಿ ಸ್ತ್ರೀಯರನ್ನು ವಶಮಾಡಿಕೊಂಡರೆರೋಗ. ರತ್ನಕೊಂಡರೆಬಹುದಿನದ ಮೇಲೆಅಲ್ಪಲಾಭ ಧಾನ್ಯ. ವಿಕ್ರಯ ಮಾಡಿದರೆ ತತ್ಕಾಲಲಾಭ ಬೀಜಬಿತ್ತಿದರೆ ಫಲಕಡಿಮೆ. ಹೊಸಬ ಟ್ಟೆಧರಿಸಿದರೆ ಬಹುದಿನಗಳನಂತರ ವಸ್ತ್ರಪ್ರಾಪ್ತಿ ಕ್ಷೌರ ಮಾಡಿಸಿಕೊಂಡರೆ ಅಪಮೃ ತ್ಯುಪರಿಹಾರ.ಅಭ್ಯಂಜನಸ್ನಾನಮಾಡಿದರೆಬಲವು ದೂರಪ್ರಯಾಣಮಾಡಿದರೆ ಬೇಗನೆಹಿಂ

ದಿನುಗುವಕ್ಕೆದೂರದೇಶಕ್ಕೆ ಹೋಗಿಬರುವವಿಷಯದಲ್ಲಿ ಪ್ರಶ್ನೆಮಾಡಿದರೆ ಎದಿನಗೊಳಗೆ ಅವರ ವರ್ತಮಾನತಿಳಿಯುವುದು. ಸಂತಾನದಪ್ರಶ್ನೆಕೇಳಿದರೆ ಸಾವಕಾಶವೆಂದುಹೇಳಬೇ ಕು ಮರಣವಿಯಷವಲ್ಲಿ ಸಂಶಯವುಂಟಾಗಿ ಪ್ರಶ್ನೆ ಮಾಡಿದರೆಬದುಕಿರುವರೆಂದು ತಿಳಿಯ ಬೇಕು. ರಾಜಕೋಪಕ್ಕೆ ಪಾತ್ರನಾದರೆ ಸಂಕಟಪರಿಹಾರಪ್ರತಿಷ್ಠಾದಿಗೆಶ್ರೇಷ್ಠ ಸನ್ಯಾ ಸತ್ವ ತೆಗೆದುಕೊಂಡರೆ ಅನಾಯಾಸದಿಂದ ಅನಿಷ್ಟ ಕಾಲಮಾಡಿದರೆ ಬೇಗನೆ ತೀ ರುವುದು ಪಿಶಾಚಿಯಆವೇಶಬಂದರೆ ಶೀಘ್ರದಲ್ಲಿಬಿಡುವುದು. ಕಬ್ಬಿಣಕರಗಿಸಿದರೆಅಗ್ನಿಭ ಯ. ಕಲ್ಲನ್ನೊಡೆದರೆ ರಕ್ತಬೀಳುವುದು. ಸುರಂಗಮಾರ್ಗದ ಕೆಲಸಮಾಡಿದರೆ ಕ್ಷೇಮ. ಗಂ ಧದಮರ,ಇದ್ದಲುಗಳನ್ನುಸುಟ್ಟರೆಭಯ. ಶಿಲ್ಪಿಕಾರ್ಯಾದಿಗಳಲ್ಲಿ ಫಲಾಧಿಕವು. ನಾಟ್ಯ ಪ್ರಾರಂಭಿಸಿದರೆ ದ್ರವ್ಯಹಾನಿ. ಪಶುಗಳಿಗೆ ಹಿಂಸೆಕೊಟ್ಟರೆ ಕಷ್ಟ ಮಂತ್ರತಂತ್ರಗಳಿಗೆಲೋ ಪ ದೇವತಾಕ್ರಮಗಳನ್ನು ತಂದರೆ ಜನವಿರೋಧ. ಮುದ್ರಧಾರಣಮಾಡಿದರೆ ಅಧಿ ಕಾರಕ್ಕೆಭಂಗ. ಪಟ್ಟಧಾರಣೆಗೆಶ್ರೇಷ್ಠ,ಸ್ನೇಹಮಾಡಿದರೆ (ಪ್ರಭುಗಳವಿಶ್ವಾಸಕ್ಕೆ ಪಾತ್ರನಾ ದರೆ) ಬೇಗನೆಫಲಸಿದ್ಧಿ, ಧನವನ್ನು ಹೂತಿಟ್ಟರೆಹಾನಿ. ಶಪಥಮಾಡಿದರೆ ತನ್ನಕಾರ್ಯಸಿದ್ಧಿ ವ್ರತಾರಂಭಗಳಿಗೆ ಶ್ರೇಷ್ಠ. ತೋಟದಕೆಲಸಮಾಡಿದರೆ ಅನ್ಯರವಶ. ಕಪಿ. ವಗೈರೆಪಶುಗ ಳನ್ನುನಡಿಸಿದರೆ ಫಲಪ್ರಾಪ್ತಿ. ಹೋದವಸ್ತುವನ್ನು ಹುಡುಕಿದರೆ ದೊರೆಯುವುದು. ಯಂತ್ರಕಟ್ಟಿದರೆ ಅನಿಷ್ಟ. ಸಂಭವಿಸುವುದು. *

ಆದಿತ್ಯ ವಾರ ಈನಕ್ಷತ್ರಬಂದರೆ ನಂದಯೋಗ. ಸೋಮವಾರಶುಭಯೋಗ. ಮಂ ಗಳವಾರಅಮೃತಸಿದ್ಧಿಯೋಗ. ಬುಧವಾರ ಮೃತ್ಯುಯೋಗ. ಗುರುವಾರ ಶೂಲಯೋಗ. ಶು ಕ್ರವಾರ ಶುಭಯೋಗ. ಶನಿವಾರ ಸಿದ್ಧಿಯೋಗ. ಅಮಾವಾಸೆಯಲ್ಲಿಅಗ್ನಿಯೋಗ. ಸ ಪ್ತಮಿಯಲ್ಲಿದಾನಯೋಗ.ಚಂದ್ರನುಅಶ್ವಿನಿಯಲ್ಲಿದ್ದುಪೂರ್ವಫಲ್ಗುಣಿಯಲ್ಲಿ ಕ್ರೂರಗ್ರಹವಿ ದ್ದರೆಮಹಾಶೂಲಯೋಗ. ಮಧ್ಯಾಹ್ನದಲ್ಲಿ ಕೆಂಪುಮೇಘವುಕಾಣಿಸಿದರೆಸುವೃಷ್ಟಿ. ಚೈತ್ರ ಮಾಸದಲ್ಲಿಅಶ್ವಿನಿನಕ್ಷತ್ರವು ಶೂನ್ಯವೆನಿಸುವುದು ಉತ್ಪಾತಕಗಳಾದರೆ ವಾಯುಹೆಚ್ಚು ಸಂಕ್ರಮಣಕ್ಕೆ ಪಾಡ್ಯಸೇರಿದರೆ ಧಾರಣೆಮಧ್ಯಮ. ಪ್ರಥಮರಜಸ್ವಲೆಯಾದರೆ ಸೌಭಾಗ್ಯ ವಂತಳು. ಪುತ್ರವತಿಯು ಆಗುವಳು *

ಸ್ತ್ರೀಸಂಭೋಗ ನಾಮಕರಣ ಅನ್ನಪ್ರಾಶನ,ಚೌಲ,ವಿದ್ಯಾದೀಕ್ಷೆ(ಉಪನಯನ)ಅಕ್ಷರಾಭ್ಯಾ ಸ, ವೇದಪುರಾಣಾಧ್ಯಯನ, ತೈಲಾಭ್ಯಂಜನ,ವಸ್ತ್ರಾಭರಣ, ಛತ್ರ,ಚಾಮರವ್ಯಾಪಾ ರ ಪಲ್ಲಕ್ಕಿ, ಕುದುರೆ,ಆನೆಗಳಮೇಲೆ ಹತ್ತುವುದು, ವಾಸ್ತುಕರ್ಮ ಚಿತ್ರಬರೆಯುವುದು, ಭೂಮಿಯಉಳತೆ,ಬಿತ್ತನೆ,ತೆಂಗಿನಗಿಡಗಳನ್ನುನೆಡುವುದು,ಗಿಡವನ್ನುಹಾಕುವುದು, ತೀರ್ಥ ಯಾತ್ರೆ, ಯುದ್ಧ,ಕ್ಷೌರ, ರಾಜ ದರ್ಶನಕಾರ್ಯಗಳಿಗೆ ಈನಕ್ಷತ್ರವು ಶುಭವಾದದ್ದು. ಅವಳಿ ಹೆಣ್ಣುಮಕ್ಕಳುಜನಿಸಿದರೆತಾಯಿಗೆಮೃತ್ಯು.ಅವಳಿ ಗಂಡುಮಕ್ಕಳುಜನಿಸಿದರೆ ತಂದೆಗೆಭಯ ಒಂದುಹೆಣ್ಣು.ಒಂದುಗಂಡು(ಅವಳಿ)ಹುಟ್ಟಿದರೆ ಯಾವುದಾದರೊಂದು ಶಿಶುವಿಗೆ ಹಾನಿ

ಅಶ್ವಿನೀನಕ್ಷತ್ರದಲ್ಲಿಹುಟ್ಟಿದವನು ಉದ್ದವಾದತೋಳು, ಅಗಲವಾದಕಣ್ಣುಗಳುಳ್ಳ ವನು, ರಾಜಪೂಜಿತನು,ವಾಗ್ಮಿ (ವಾಕ್ಚಾತುರ್ಯವುಳ್ಳವನು) ಸೌಂದರ್ಯಶಾಲಿ,ಸೌ ಭಾಗ್ಯವಂತ.ಮೃದುವಾದ ಉಗುರುಗಳುಳ್ಳವನು ಸಾಹಸಿ,ವೈದ್ಯನು. ಕದಾಚಿತ್ ಕಳ ನು. ಕೆಟ್ಟಸಹವಾಸಿಯು. ಆಚಾರಹೀನನು. ಕದನದಿಂದ ಅನ್ನ ತಿನ್ನುವವನು. ಕೃಪ್

ಕೃಪಾರಹಿತ, ಲೋಭಿ,ಡಾಂಭಿಕ, ಮೋಸ ಸುಳ್ಳುಗಾರನು. ಇಂಥವುಗಳನ್ನು ಗುಟ್ಟಾಗಿ ನಡೆಸುವನು. ಮತ್ತು ಖಂಡಿತನಾತಾಡುವವನು. ಪರೋಪಕಾರಿ ಧೈರ್ಯಶಾಲಿ· ಬುದ್ಧಿ ಸಂತತಿ ಅವರವರಂತೆನಡೆ ಸುವನು. ಯೋಗಿ,ಪಾತಕಕಾರ್ಯದಲ್ಲಿಮುಂದು. ಅಲ್ಪ ಆಹಾರಿ, ಸುಖಿ,ಇದ್ದದ್ದರಲ್ಲಿ ಅನ್ನದಾನಮಾಡುವವನು· ಚಪಲಚಿತ್ತನು. ಪರದೇಶ ಹಾಗೂ ಪರಸ್ಥಳ ವಾಸಿ. ಸೊಂಟದಲ್ಲಿಗುರುತುಳ್ಳವನು. ಸ್ಥಿರವಾದಕೆಲಸಗಳಿಗೆಪ್ರಯತ್ನಮಾಡುವವನು. ಆಲೋಚನೆ ಹಾಗೂ ದೂರ ದೃಷ್ಟಿಯಿಂದ ತನ್ನ ಕಾರ್ಯ ಸಾಧಿಸಿಕೊಳ್ಳುವವನು. ಪರಸ್ತ್ರೀವ್ಯಾಮೋಹಿಯು. ಪರಾಧೀನದಿಂದಬಲಶಾಲಿ ಈ ನಕ್ಷತ್ರದ ಮೊದಲನೆಪಾದದಲ್ಲಿ ಜನನವಾದರೆ ತಸ್ತ್ರರಾಂಶಕ್ಕೆ ಅಂಗಾರಕ ( ಕುಜ ) ಅಧಿಪತಿ. ಲೋಹ ಧಾತು ,ಅಗ್ನಿ. ಆಯುಧಗಳಸಾಹಸಿ, ಚಾಡಿಕೋರನು. ಪರವನಿತಾಸಕ್ತನು. ಎರಡನೆಯಪಾದಕ್ಕೆ ಭೋಕ್ತಾಂಶಕ್ಕೆ, ಶುಕ್ರನಧಿಪತಿ. ಧಾರ್ಮಿಕ, ತೇಜಸ್ವಿ, ಧನ,ಧಾನ್ಯ ಸಮೃದ್ಧಿಯುಳ್ಳವನು.ಮೂರನೆಯಪಾದವಿದ್ಯಾಂಶಕ್ಕೆ.ಬ.ಧಅಧಿಪತಿ ಸ್ವಯಂಸಂಪಾದನೆ ಯಿಂದಜೀವಿಸುವನು.ಬಹಳ ವಿದ್ಯಾವಂತ.ಭೋಗಿ. ಚಿತ್ತನಿಷ್ಠನು.ವಿವಾದದಲ್ಲಿ ಕೋರ್ಟಿನಲ್ಲಿಗೆಲ್ಲುವನು ಶೂರನು.ನಾಲ್ಕನೆಪಾದ ಧನವಾಂಶಕ್ಕೆ ಚಂದ್ರನುಅಧಿಕಾರಿ.ದೇವತಾಪೂಜ. ಧರ್ಮಕಾರ್ಯಗಳಲ್ಲಿನಿರತನು. ಸ್ತ್ರೀಯರವಶೀಕರಣದಲ್ಲಿ ಪರಲಆಕರ್ಷಣೆಯಲ್ಲಿ ಮುಂದು ಅಂತೂ ಈ ನಕ್ಷತ್ರದಲ್ಲಿ ಹುಟ್ಟಿದವನು ಬಲಿಷ್ಠನಾಗುವನು.

*

ಈ ನಕ್ಷತ್ರದಸಂಪೂರ್ಣಭಾಗಕ್ಕೆ ಪರಾಶರರಅಭಿಪ್ರಾಯದಂತೆ ೭ ವರ್ಷಗಳವರೆಗೆ ಕೇತುದಶ. ಅಮಾವಾಸೆಯದಿನ, ಅಶ್ವಿನೀನಕ್ಷತ್ರದಲ್ಲಿ ಹುಟ್ಟಿದವನಿಗೆರಾಜಯೋಗ ಆದರೆ ರಾಜತ್ವಪ್ರಾಪ್ತಿಗೆಭಂಗ. ಗುರುವುಚಂದ್ರನೊಡನೆಸೇರಿದ್ದರೆ. ಸರಕಾರದಅಧಿಕಾರ (ಉದ್ಯೋಗ) ದಿಂದಲೇಜೀವನ ಶುಕ್ರ,ಕುಜರುಸೇರಿದ್ದರೆ ಪತ್ನಿ ವಿನಾಶ.ಬುಧ,ಶುಕ್ರರು ಕೂಡಿದ್ದರೆಹೆಂಗಸಿನ ಮೂಲಕ ಹೆಚ್ಚುಸಾಲ ಗುರುಶುಕ್ರರುಸೇರಿದ್ದರೆ ರಾಜಋಷಿಯೋಗ· ರವಿ. ಶನಿಗಳುಕೂಡಿದ್ದರೆ ಜನರಲ್ಲಿವಿರೋಧ. ವ್ಯಾಪಾರ,ಉದ್ಯೋಗದಿಂದ ಲಾಭ,ಕುಜ,ಬುಧ, ರಾಹುಗಳಯೋಗವಿದ್ದರೆ ರೋಗಬಾಧೆ. ಶುಕ್ರ,ರವಿ,ರಾಹುಗಳ ಯೋಗವಿದ್ದವನಪಿತೃವಿಗೆಅಥವಾಹೆಂಡತಿಗೆನೇತ್ರರೋಗ. ಚಂದ್ರಗ್ರಹಣವಾದರೆ ಅಂಗಗಳಲ್ಲಿಭಂಗ. ಸಿಂಹಂಗಾರಕಯೋಗದಲ್ಲಿಹುಟ್ಟಿದವನಿಗೆ ಮಕ್ಕಳಿಂದದು :ಖ.ವ್ಯಾಳದ್ರೇಕ್ಕಾಣದಲ್ಲಿ ಕುಜನಿದ್ದರೆ ಸರ್ಪಭಯ, ಗುರುದೃಷ್ಟಿಯಿದ್ದರೆ ಪರಿಹಾರ.ಶುಕ್ರದಶಕ್ರೂರವಾಗುವುದು. ಶುಕ್ರನುರಾಹುವಿನೊಡನೆ ಸೇರಿದರೆ ಮಾರಕದಶಿಯಾಗುವುದು. ಸ್ತ್ರೀ,ಧನ ಇವುಗಳವ್ಯಸನದಿಂದ ಮೃತ್ಯುಪ್ರಾಪ್ತಿ. ಅಶ್ವಿನಿಯಮೊದಲ ೩ಘಳಿಗೆಗಳಲ್ಲಿ ಹುಟ್ಟಿದರೆ ಅಭುಕ್ತಗಂಡ. ಚಂದ್ರ ಶನಿಗಳು ಸೇರಿದರೆ ಬಾಲಾರಿಷ್ಠ.

*

ಅಶ್ವಿನಿನಕ್ಷತ್ರದಲ್ಲಿಹುಟ್ಟಿದವನಿಗೆ ೧ನೇವರ್ಷದಲ್ಲಿಅಗ್ನಿ ಚಿಕಿತ್ಸೆ ೩ನೇವರ್ಷದಲ್ಲಿಜ್ವರ ೬ ನೇವರ್ಷದಲ್ಲಿಕುಕ್ಷಿರೋಗ. (ಹೊಟ್ಟೆನೋವು) ೪,೫,ರಲ್ಲಿನೇತ್ರ ಬಾಧೆ,೭ ರಲ್ಲಿಧನವ್ಯಯ. ೧೧,೨೦ ರಲ್ಲಿ ಅಪಮೃತ್ಯು ೩೪ರಲ್ಲಿಮೃಗಬಾಧೆ.೪೦ರಲ್ಲಿವ್ಯಾಧಿ.೬೪ ರಲ್ಲಿಮಹಾವ್ಯಾಧಿ. ಮಿಥುನ, ಕನ್ಯಾ, ಮಕರ, ಗಳಲ್ಲಿಗೋಚಾರಕಾಲದಲ್ಲಿರವಿ ಕುಜ ಶನಿಗಳುಫಲವನ್ನು ಕೊಡುವರು. ವೃಷಭ, ಸಿಂಹ, ತುಲ, ಧನಸ್ಸು ಕುಂಭಗಳಲ್ಲಿ ಗುರುವು ಸಂಚಾರ ಮಾಡುವಾಗ ಧನಲಾಭ, ದಾನಧರ್ಮದ ಸತ್ಕಾರ್ಯಗಳಿಗಾಗಿ ಧನ ವ್ಯಯವಾಗುವಿಕೆ,

ಫಲಪ್ರಾಪ್ತಿಯಾಗುವುದು ಕರ್ಕ,ಸಿಂಹಗಳಲ್ಲಿಶನಿ ಸಂಚರಿಸುವಾಗ ಐದುವರ್ಷಗಳವರೆಗೆ ಅನರ್ಥ. ವೃಶ್ಚಿಕರಾಶಿಯಲ್ಲಿ ೨||ವರ್ಷಕಷ್ಟ. ಮೊದಲನೆಯಚಾರದಲ್ಲಿಶನಿಯು ಹೆಚ್ಚು ಕಷ್ಟಕೊಡುವುದಿಲ್ಲ. ೨ನೆಯದರಲ್ಲಿಮಾನ, ಧನ, ಬಂಧು ವಿಯೋಗವಾಗುವುದು. ೩ನೆಯದರಲ್ಲಿಆಯುಷ್ಯಪ್ರಮಾಣ ಕಡಿಮೆಯಾಗುವುದು. ವೃಷಭದಲ್ಲಿಶನಿಯಿದ್ದರೆ ಉತ್ತಮ ಫಲಪ್ರಾಪ್ತಿ. ಮೀನರಾಶಿಯಲ್ಲಿ, ಜನ್ಮದಲ್ಲಿದ್ದರೆಧನ,ಮಾನಹಾನಿ ಗುರುಬಲ,ದೈವಬಲವಿದ್ದರೆಸರ್ವಕಷ್ಟ ಪರಿಹಾರವಾಗುವವು. ೯೬ವರ್ಷ ಆಯುಷ್ಯ. ರಸಕಲ್ಪಸಾಧನೆ,ರಸಸಿದ್ಧಯೋಗಸಾಧನಕ್ಕೆಶ್ರೇಷ್ಠ, ದೇವಪ್ರಸಾದಮಹಾತ್ಮರಅನುಗ್ರಹ,ಪಾಪವಿಲ್ಲದಕೆಲಸ, ಪರೋಪಕಾರ,ಪುಣ್ಯ ಇವುಗಳಿಂದ ಅಪರಿಮಿತಾಯುಷ್ಯದಿಂದ ಚಿರಂಜೀವಿಯಾಗುವನು ಅಶ್ವಿನಿನಕ್ಷತ್ರದದಿನಮನೆಯಲ್ಲಿ ಯಾರಾದರೂಸತ್ತರೆ, ಆದಿನಕ್ರೂರವಾದದ್ದಾಗಿದ್ದರೂ ೬ವರ್ಷದಲ್ಲಿ ಆಮನೆಯಲ್ಲಿ ಬೇರೊಂದುಪ್ರಾಣಿಯೂಸಾಯುವುದಿಲ್ಲ. ಅಶ್ವಿನಿನಕ್ಷತ್ರದಲ್ಲಿ ಶಿವಲಿಂಗ,ರುದ್ರಾಕ್ಷಿ,ರತ್ನಗರ್ಭ ಗಣಪತಿ, ಸುವರ್ಣಗರ್ಭಾಂಬಿಕೆ, ಸಾಲಗ್ರಾಮ,ಗೋವು, ಗಂಗೆ,ಮಹಾಮಂತ್ರಗಳು ಪ್ರಾಪ್ತವಾದರೆಭೋಗ, ಭಾಗ್ಯ ಸೌಭಾಗ್ಯಾದಿಮಂಗಲವು ಉತ್ತರೋತ್ತರಾಭಿವೃದ್ಧಿ,ಶ್ರೇಯೋಭಿವೃದ್ಧಿಲಭಿಸುವುದಾಗಿ ತಿಳಿಯಬೇಕು

### ಇತಿ ಅಶ್ವಿನಿ ನಕ್ಷತ್ರ ವಿಚಾರ ವಿರಾಮ:



## ಭರಣೀ ನಕ್ಷತ್ರದ ಗುಣಕರ್ಮಾದಿಗಳ ವಿವರ.

ಶ್ಲೋಕ:– ಯುದ್ಧಾಭಿಘಾತವಧಬಂಧವಿಷಾಗ್ನಿಶಸ್ತ್ರ | ಭೇದಾಪವಾದಭಯಸಹಸಶೌರ್ಯಕರ್ಮ || ದ್ಯೂತಾಭಿಚಾರಪರುಷಾನೃತಶೌರ್ಯಜಾಲ | ಕಾರ್ಯಾನಿಸಿದ್ಧಿ ಮುಪಯಾಂತಿಯಮಸ್ಯಭೇತು| ಲೀಲೂಲೆಲೋಭರಣೀ| ತ್ರಿಕೋಣರೂಪಾತ್ರಿತಾರಕಾಕರಣಿ | ತಿರ್ಯಗಧೋಮುಖಬಾಲ | ಮನುಷ್ಯಗಣಜಾರ್ಧತಾರಕಾವಿಮುಲಾ | ನಕ್ಷತ್ರಂಯಮದೈವತ್ಯಮುಗ್ರಂಗ್ರಾಮಾಗ್ನಿಶಸ್ತ್ರವತಾ| ಜಾತೋದುರ್ಯೋಧನಶ್ಚಾತ್ರ ತದ್ಗುಣಃಪರಿಗಣ್ಯತೆ| ಯುಧಿಷ್ಠಿರಶ್ಚತತ್ರೈವಜಜ್ಞೆಯತ್ರಸುಧಾಫಣಿ | ವೃಕ್ಷಸ್ತ್ವಮಲಕ | ಕಾಕಪಕ್ಷಿ ಪಿತೃವನಸ್ಥಿತ: | ಉಕಾರ:ಪಿಂಡಭೂಜೀಚ| ಕಲಿರಾಡ್ಬಲಗರ್ವಿತ:| ಪಾಚೀಚಮಹಿಷಾರೂಢೋಭೀಷಣೋನೀಲಕಂಬಳ: | ವಿಷಂವೀರಂವೈವಸ್ವತರ್ಕ್ಷೆತತ್ರಜಾತೋದುಷ್ಟಂ | ಹವಿರವೃತಂ ಧರ್ಮರಾಜರ್ಕ್ಷೆ | ತತ್ರಜಾತಶಿಷ್ಯಂಮಧ್ಯಲೋಚನಂ | ಚಂಡಾಲಜಾತಿ:, ದಿನತ್ರಯಂ ಮಧ್ಯನಾಡಿ | ಜಾನುರಜ್ಜು, ಮೇಷರಾಶಿ ಕುಜಃ ಆಲಸ್ಯಂ | ಮರಣವಾರ್ತ ಶಿವಶ್ಶಿವೋ ನಾಮಶಿವೋಶಿವಾನಾಮಿತಿಸ್ಮಶಾನರುದ್ರ | ಸಹಿತಪ್ರೇತರಾಜಸೇವ್ಯಧರ್ಮರಾಜರೂಪಂವಿಷಘುಟಿಕಾವೀರಃ ||೨೪|| ಅಮೃತಘುಟಿಕಾಃ ಹವಿ: ||೪೮|| ಅಮೃತಸಿದ್ಧಿರೋಜಾತೋವಿಶೇತುಕಾಣಿಕೋಜವಿ | ಆದಾವಭುಕ್ತಘುಟಿಕಾಸ್ಸಪ್ತ| ಅವಶ್ಯಕಪ್ರಯಾಣೆಪೂರ್ವದಿಗುತ್ತರದಿಕ್ಪ್ರಶಸ್ತಿ | ತಿಲತಂಡುಲಭಕ್ಷಣೇನಃ | ಜ್ವರೆಪ್ರಾಣಭಯೆ ಏಕಾದಶದಿನಾರಿಷ್ಟಂ | ಕೃಷ್ಣವರ್ಣಾನಾಯಣೀಂ| ದ್ವಿಭುಜಾಂಪಾಶದಂಡಧಾರಿಣೀ| ಮಹಿಷಾರೂಢಂನೀಲಾಂಬರಾಂತಿ

ಫಲಾದಮೂರುರಾಶಿಗಳಲ್ಲಿ ಶನಿಯುಸಂಚಾರಮಾಡುವಾಗ ೭ವರ್ಷಗಳವರೆಗೆ ದುಷ್ಟ ಲಾಕ್ಷತಂಗುಡಾನ್ನಪ್ರಿಯಾಂ ಯಮಪುತ್ರಮಾರ್ಜಯೇತ್ | ಯಮಾಯ ಸೋಮ ಗಾಂಸುಸುತಕೃದಃ ಇತಿಮಂತ್ರಃ | ಅಷ್ಟೋತ್ತರಶತಹೋಮಂ| ಗ್ರಾಮಸ್ಯದಕ್ಷಿಣಾಯಾಂ ದಿಶಾತೌ ಬಲಿಂಹರೇತ್ | ಸಹಸ್ರಂಜಪಃ ಗಜದಾನಂ ಮಹಿಷದಾನಂವಾ | ಅಷ್ಟೌಬ್ರಾಹ್ಮಣ್ ಗ್ರಾಹಯೇತ್ | ಮಹಶಾಂತೌ ಮಹಾಕ್ರಮದಂತಿ ಬೀಜಾನಿ ವಿರೇಚನೇಽಪಿ | ಏಕಾ ದಶಾಹಾತ್ಸುಖೀಭವತಿ | ಕಷ್ಟಸಾಧ್ಯಾಹೇಷ್ಟಸಿದ್ಧಿಃ |

ಅಸ್ಮಿನ್ ಭರಣೀನಕ್ಷತ್ರೆ ಭಾನುವಾರೆ ರೋಗೋತ್ಪತ್ತೌ ಮಾಸಾನಂತರಂ ಸುಖೀ ಭವತಿ, ಸೋಮವಾರೆ ನಿಂಶದ್ದಿನಾನಂತರಂ ಸುಖೀಭವತಿ || ಭೌಮವಾರಯುಕ್ತೆ ಭರಣೀ ನಕ್ಷತ್ರೆ ಜ್ವರೋತ್ಪತ್ತೌ ಮಹಾಶ್ಯಾಂತ್ಯಾ ಮಾಸದ್ವಯೆ ಆರೋಗ್ಯಂ, ಬುಧವಾರೆ ವಿಂಶ ದ್ದಿನಾನಂತರಂ ಆರೋಗ್ಯಂ, ಗುರುವಾರೆ ದ್ವಾದಶದಿನಾನಂತರಂ ಆರೋಗ್ಯಂ, ಭೃಗುವಾರೆ ಪಂಚವಿಂಶದ್ದಿನಾನಂತರಂ ಆರೋಗ್ಯಂ, ಮಂದವಾಸರೆ ಮಾಸತ್ರಯಾದಾರೋಗ್ಯಂ, ಮ ಹಾಶಾಂತಿಃ, ಭರಣ್ಯಾಂಜ್ವರೆಪ್ರಾಣಭಯಂ, ಏಕಾದಶದಿನಾರಿಷ್ಟಂ

ಆದಿವಾರೆ ರಂಧ್ರಯೋಗಃ, ಸೋಮವಾರೆ ಗಂಡಯೋಗಃ, ಕುಜವಾರೆ ಕರ್ತ್ರಿಯೋ ಗಃ ಬುಧವಾರೆ ನಾಶಯೋಗಃ, ಗುರುವಾರೆ ಮೃತ್ಯುಯೋಗಃ, ಶುಕ್ರವಾರೆ ಶೂಲಯೋಗಃ ಶನಿವಾರೆ ಪೀಡಾಯೋಗಃ, ಅನುರಾಧಾಯಾಂ ಕ್ರೂರಗ್ರಹಸ್ಥಿತೆ ಮಹಾಶೂಲಯೋಗಃ, ಯೋಗಾನಾಂ ಅನುರೂಪಫಲ ಫಾಲ್ಗುಣೆ ಶೂನ್ಯನಕ್ಷತ್ರಂ|| ಗೋಚಾರೆ ಅಶ್ವಿನೀನಕ್ಷತ್ರ ವತ್ || ಕುಜಸ್ವರ್ಣಾದಿ ಚಂದ್ರಗರ್ಭ ಚಕ್ರ ಶೂಲಾಸ್ಥಿತೆ ಭರಣ್ಯಾಂರೋಗನಾಶಃ, ಉತ್ಪಾ ತದರ್ಶನೆ ಶೀತಜ್ವರ ದುರ್ಭಿಕ್ಷಾದಿ ಪೀಡಾ, ಸಂಕ್ರಮಣೆ ಮಧ್ಯಾರ್ಘಃ, ಕನ್ಯಾಗತೆ ರವೌ ಪ್ರೇತಕಾರ್ಯಾಭಿವೃದ್ಧಿಃ, ಭರಣ್ಯಾಂಪ್ರಥಮರಜಸ್ವಲಾ ಪತಿಪುತ್ರವರ್ಜಿತಾಭವತಿ || ಶಾಂತಿಕರ್ಮಣಿ ಕ್ಷೇಮಃ, ಮಾಸಪಕ್ಷಂಸಂಭೋಗವರ್ಜಂ, ವರ್ಷಧಾನ್ಯವೃದ್ಧಿಃ|ಪುಣ್ಯಕರ್ಮ ಚರಣೆ ಪಾಪಕ್ಷಯಃ ಜೇಷ್ಠಾಯಾಂರವಿಃ, ರೇವತ್ಯಾಂಕುಜಃ, ಶತತಾರಾಯಾಂ ಗುರುಃ, ಶ್ರ ವಣೆ ಶನಿಃ, ಪುಷ್ಯಮಾಂ ಬುಧಃ, ಮಘಾಯಾಂ ರಾಹು, ಆರಿದ್ರಾಯಾಂ ಶುಕ್ರಃ. ಧನಿ ಷ್ಠಾಯಾಂಪೂರ್ಣಚಂದ್ರಃ ಭರಣೀನಕ್ಷತ್ರಜಾತಸ್ಯ ಉತ್ಪಾತಪ್ರದಃ || ಭರಣ್ಯಾಂಮರಣೆ ಪತ್ನಿರಾತ್ಮಾಣ್ಯಾಂ ತರಮರಣಂ, ಭರಣ್ಯಾಂಜಾತಃ, ಚಂಚಲಃ, ಶೌಚಾಚಾರವರ್ಜಿತಃ ಮೋಹೋಷ್ಣಶರೀರಃ, ಪಂಡಿತಪುತ್ರಃ, ನ್ಯಕಾರಿಃ ದೀರ್ಘಾಯುಃ, ಸತ್ಯವಾದೀ, ಭೋಗಿ, ಸ್ತ್ರೀಪ್ರಿಯಃ, ವಿಶ್ರಕರ್ಮಾ, ಗರ್ವಿತಃ, ನಿದ್ರಾಳುಃ, ದಾತಾ|| ಅಸೂಯಾಳುಃ, ಉಪಕಾರೀ, ರಕ್ತಾಕ್ಷಃ, ವಕ್ರಕೇಶಃ, ನಾಭಿಸಮೀಪೆ ಸೂಕ್ಷ್ಮಮತ್ಸ್ಯರೇಖಾ, ಊರುಪೀಡ, ಪ್ರಥಮಪಾ ದೆಜಾತಃ, ಸತ್ಕರ್ಮ್ಯಂಶಃ ರಾಜಾಂಶಃ | ಗುಣವಾನ್, ಧೈರ್ಯಃ, ಜೇತಾಯುದ್ಧೆ ಕಳತ್ರಾಣಿ ಮಿತಾಮಿತ್ರಫಲಂ ಭವೇತ್|| ಪದ್ಮಾಕ್ಷಃ, ಕನಕಾಭಶ್ಚರಃ ಚಾಪಯುತಃ ಪುಮಾನ್ || ದ್ವಿತೀಯಪಾದೆಜಾತಃ, ಕನ್ಯಾಬುಧಾಂಶಃ, ನಪುಂಸಕಃ, ತುಲ್ಯಬುದ್ಧಿಃ, ಮಾಯಾವೀ. ಮೃ|| ತ್ಯುಪೀಡಿತಃ, ಸ್ತ್ರೀಹೇತೊ ನಿರಪಂಕಾರೀ ಕಾಲಜ್ಞ ಕರ್ಮವತ್ಸ, ಭುಃ|| ವ್ಯಾಪಾರಕಮ ಸಂಯುಕ್ತೊ ಮೇಧಾವೀಪಂಡಿತಃ ಪುಮಾನ್ || ತೃತೀಯಪಾದಸ್ಯ ಶುಕ್ರಃ, ನಿರ್ಭಯಃ | ಬಹುಲೋಲುಪಃ||ಉತ್ಸಾಹೀಶೂರಃ, ಸರ್ವದಾಪ್ರೀತಿಸಂಯುಕ್ತೊ ಗೃಹೇ ಮಂಗಳಕಾರಕಃ,

ರಾಜಪಮಾನ್ಯೋಪಿ ಪುರುಷೋ ಸರ್ವಶಾಸ್ತ್ರವಿಶಾರದ: ಚತುರ್ಥಪಾದಸ್ಯಕಾಜಃ | ದರಿದ್ರಃ ಕ್ರೂರ:, ಕಟುಭಾಷೀಕ್ಲೇಶಯುಕ್ತಃ, ಬಹುಪ್ರಜಾ, ಫಲಕಾಲ ಪರಿತ್ಯಾಗೀ ಶತ್ರು ಕ್ರೂರ ಮತಿ: ದರ್ಪಸ್ತೋಹಿಂಸಕೋಪ್ಯಷಲೀಪತಿಃ || ಕೋಪೀಚಮತ್ಸರಗ್ರಸ್ತೋ ಕಾರ್ಯಾರ್ಥೀ ಸರ್ವವಂಚಕ: ಸ್ಮೃತ: ||

ಭರಣ್ಯಾಂರಾತ್ರೌಜಾತೊ ರಾಜಯೋಗಃ, ದಿವಾಜಾತೊ ರಾಜಯೋಗಭಂಗ:,ಅಮಾಯುಕ್ತಂಜಾತೋಭೂ ಪಾಲಃ,ತತ್ಸಮೋವಾ,ಪೂರ್ಣಿಮಾಯುಕ್ತಂಜಾತೊ ದುಷ್ಟಃ, ಕ್ಷುದ್ರಾಳುರ್ವಾಭವತಿ, ಅಂತರಾಳೆ ಅನ.ಪಾತಫಲಂ, ಗುರುಚಂದ್ರಯುಕ್ತೆ ರಾಜಾಧಿಕಾರ ಜೀವನಂ ಶನಿಚಂದ್ರಯುಕ್ತೆ ಸೇವಕಾನೃತ್ತಿರ್ವಾಭವತಿ|| ಕುಜಯುಕ್ತೆ ದ್ವಾರಪಾಲಕೋಭವತಿ, ಬುಧಯುಕ್ತೆ ವಾಣಿಜ್ಯ, ರವಿಯುಕ್ತೆ ವೈದ್ಯಕರ್ಮ, ಶುಕ್ರಯುಕ್ತೆ ಸ್ತ್ರೀಮೂಲಾದ್ಧನಲಾಭ: ರಾಹುಕೇತುಯುಕ್ತೆ ತಾಂತ್ರಿಕಕರ್ಮವಾಭವತಿ || ಭರಣೀನಕ್ಷತ್ರಸ್ಯ ಶುಕ್ರ ಮಹರ್ದಶಾವರ್ಷಾಣಿವಿಂಶತಿ-ಶುಕ್ರಭುಕ್ತಿಮಾಸಾ: ಚತ್ವಾರಿಂಶತಾ-ಪ್ರಥಮಮಾಸೆ ಪ್ರಥಮಾಬ್ದೆ ಅಪಮೃತ್ಯುಃ, ಏಕಾದಶೆ ದ್ವಾದಶಾಬ್ದೆ ಅಗ್ನಿಭಯಂ, ವಿಂಶದ್ಯಬ್ದೆ ಮಹಾವಿಚಿತ್ರ ರೋಗಃ, ಸಪ್ತವಿಂಶತ್ಯಬ್ದೆ ಜಲಗಂಡಃ, ಶತ್ರುಭಯಂ, ಸಪ್ತತ್ರಿಂಶತ್ಯಬ್ದೆ ಜ್ವರಾದಿ ರೋಗಬಾಧಾ. ಅಥವಾಗುಲ್ಮವ್ರಣರೋಗಾಃ, ಅಷ್ಟಚತ್ವಾರಿಂಶತ್ಯಬ್ದೆ ಶತ್ರುಭಯಂ, ಪಂಚಾಶದ್ವತ್ಸರೆ ಅಪಮೃತ್ಯು:, ಷಟ್ಸಪ್ತತಿವತ್ಸರೆ ವ್ಯಾಘ್ರಭಯಂ. ಅಸತಿಬಾಧಕೇನ ಶುಭಸಂಬಂಧದೃಷ್ಟಿಯೋಗೇನ ಸಪ್ತತಿವತ್ಸರಃ ಪರಮಾಯು:, ಅಯುರ್ಮನುಸ್ಯತೊಗ್ರಾಹ್ಯವಿ.ತಿ ಭರಣೀವಿಚಾರಃ ||

ಟೀಕೆ-: ಈ ನಕ್ಷತ್ರದಲ್ಲಿ ಯುದ್ಧಾರಂಭ, ಆ ಯುಧಕೆಲಸ, ಪರರಸೆರೆಹಿಡಿಯುವುದು, ವಿಷ, ಅಗ್ನಿ, ಕೊಲೆ, ಅಪವಾದ, ಭಯ ಸಾಹಸಕಾರ್ಯ, ದ್ಯೂತಾದ್ಯೂತ, ಕೆಟ್ಟದ್ದು ಮಾಡುವಿಕೆ, ಕಠಿಣವಚನ, ಸುಳ್ಳು, ಕಳ್ಳತನ, ಶ್ರಾದ್ಧ, ಇಂಥವುಗಳನ್ನು ಮಾಡಲು ಸಿದ್ಧಿಯಾಗುವವು, ಲಿ,ಲೂ,ಲೆ,ಲೋ ಎಂಬ ಅಕ್ಷರಗಳು. ತ್ರಿಕೋಣಾಕಾರವಾದ ೩ ನಕ್ಷತ್ರಗಳು ಅಡ್ಡವಾಗಿ, ಕೆಳಭಾಗಕ್ಕಿಳಿಮುಖವಾಗಿರುವದು. ಮತ್ತು ಸ್ತ್ರೀಜಾತಿ ಮನುಷ್ಯ ಗಣ, ಅರ್ಧತಾರಾಕಾರ ನಿರ್ಮಲವಾದದ್ದು ಯಮದೇವತ ಅಧಿಪತಿ. ಕ್ರೂರವಾದದ್ದು. ಬೆಂಕಿ; ಅಸ್ತ್ರಗಳಂತೆ ಭಯಂಕರವಾದದ್ದು. ಈ ನಕ್ಷತ್ರದಲ್ಲಿ ದುರ್ಯೋಧನನು ಹುಟ್ಟಿದ್ದು. ಅಂತೆಯೇ ಇದುಪ್ರಕೃತಿಯೊಂದರಲ್ಲಿ ಕ್ರೂರವಾದದ್ದು. ಶೌರ್ಯ, ಅಮೃತಗಳಿಂದ ಕೂಡಿದ ನೆಲ್ಲಿಗಿಡವು ಸ್ಮಶಾನದಲ್ಲಿರುವುದಾಗಿ, ಉದಾರ ಪಿಂಡ ಭೋಜನಮಾಡುವುದು. ಕಲಿಪುರುಷನ ಬಲದಿಂದ, ಅಹಂಕಾರ, ಗರ್ವಕೆಡುವುದು. ಎಮ್ಮೆಯಮೇಲೆ ಕುಳಿತು ಹಗ್ಗವನ್ನು ಹಿಡಿದುಕೊಂಡು ಭಯಂಕರವಾದದ್ದು, ಕರೆಕಂಬಳಿ ಬಣ್ಣವುಳ್ಳದ್ದು. ಈ ನಕ್ಷತ್ರದಲ್ಲಿ ಆದಿಯಿಂದ ೨೪ ಘಳಿಗೆಗಳನಂತರ ೪ ಘಳಿಗೆ ವಿಷಘಟಿಕೆ ಗಳ ನಂತರ ೪೮ ಘಳಿಗೆಗಳ ನಂತರ ೪ ಘಳಿಗೆ ಗಳವರೆಗೆ ಅಮೃತೋತ್ಪತ್ತಿ ಸಮಯ ವಿಷಘಳಿಗೆಗಳಲ್ಲಿ ಹುಟ್ಟಿದವನು ದುರ್ಯೋಧನನಂತಹ ಗುಣಗಳುಳ್ಳವನಾಗುವನು. ಅಮೃತಘಳಿಗೆಗಳಲ್ಲಿ ಹುಟ್ಟಿದವನು ಯುಧಿಷ್ಠಿರನಂತಹ ಉತ್ತಮ ಗುಣಗಳುಳ್ಳವನಾಗುವನು. ಪೂರ್ವ,ಉತ್ತರ ದಿಕ್ಕುಗಳಿಗೆ ಈ ನಕ್ಷತ್ರದಲ್ಲಿ ಪ್ರಯಾಣಮಾಡಬೇಕಾದರೆ, ಅಕ್ಕಿ, ಎಳ್ಳು ತಿಂದು ಹೊರ

ಹಲು, ಕ್ಷೇಮ. ಗಂಡು ಕೂಸು ಹುಟ್ಟಿದರೆ ಕ್ಷೇಮ, ಹೆಣ್ಣು ಕೂಸು ಹುಟ್ಟಿದರೆ ತಾಯಿಗೆ ಅರಿಷ್ಟ. ಮಧ್ಯಲೋಚನ, ಚಂಡಾಲಜಾತಿ, ಜ್ವರ ಬಂದರೆ ೨೧ ದಿನಗಳನಂತರ ಗುಣ. ಶನಿವಾರ, ಅಥವಾ ಮಂಗಳವಾರ ಈ ನಕ್ಷತ್ರ ಕೂಡಿದದಿವಸ "ಶಿವಶ್ಶಿವಾನಾಮು ಶಿವೋ ಶಿವಾನಾಂ" ಎಂದು ಧರ್ಮಸ್ವರೂಪನಾದ ಯಮಧರ್ಮರಾಯನ (ಕಬ್ಬಿಣದ ಪಾಶ ದಂಡವನ್ನು ಧರಿಸಿರುವ ಎಮ್ಮೆಯ ಮೇಲೆ ಕುಳಿತಿರುವ ನೀಲ ವಸ್ತ್ರವುಳ್ಳ) ಪ್ರತಿಮೆಯನ್ನು ಮಾಡಿಸಿ ಎಳ್ಳು ಅಕ್ಕಿಯ ಅನ್ನದ ನೈವೇದ್ಯದಿಂದ ಪೂಜಿಸಿ, ಸ್ಮಶಾನ ರುದ್ರನಿಗೆ ಬಲಿದಾನಕೊಡಲು ೧೬ ದಿನಗಳನಂತರ ಗುಣವಾಗುತ್ತದೆ.

ಆದಿತ್ಯವಾರ ಭರಣೀ ನಕ್ಷತ್ರ ವಿದ್ದದಿವಸ ಖಾಯಿಲೆ ಯಾದರೆ ತಿಂಗಳಾಂತ್ಯದಲ್ಲಿ ಸುಖವಾಗುತ್ತದೆ. ಸೋಮವಾರವಾದರೆ ೨೦ ದಿನಗಳ ನಂತರ ಗುಣವಾಗುತ್ತದೆ ಮಂಗಳವಾರ ವಾದರೆ ಮಹಾ ಶಾಂತಿಯನ್ನು ಮಾಡಿಸಿದಲ್ಲಿ ೪ ತಿಂಗಳ ನಂತರ ಆರೋಗ್ಯ. ಬುಧವಾರ ವಾದರೆ ೨೦ ದಿನಗಳ ನಂತರ ಸುಖ. ಗುರುವಾರ ವಾದರೆ ೧೨ ದಿನಗಳನಂತರ ಗುಣ. ಶುಕ್ರವಾರ ವಾದರೆ ೨೫ ದಿನಗಳನಂತರ ಕ್ಷೇಮ ಶನಿವಾರ ವಾದರೆ ಮಹಾ ಶಾಂತಿ ಮಾಡಿಸಿದಲ್ಲಿ ೩ ತಿಂಗಳುಗಳ ನಂತರ ಗುಣವಾಗುತ್ತದೆ. ಭರಣಿ ನಕ್ಷತ್ರದಲ್ಲಿ ಜ್ವರೋತ್ಪತ್ತಿಯಾದರೆ ಪ್ರಾಣಕ್ಷಯ. ಮಹಾಶಾಂತಿ ಮಾಡಿಸಿದಲ್ಲಿ ೨೧ ದಿನಗಳ ನಂತರ ಆರೋಗ್ಯ ವಾಗುತ್ತದೆ

ಆದಿತ್ಯವಾರ ಈ ಭರಣಿ ನಕ್ಷತ್ರ ಬಂದರೆ ರಂಧ್ರಯೋಗ ಸೋಮವಾರ ಗಂಡಯೋಗ. ಮಂಗಳವಾರ ಕರ್ಮಯೋಗ. ಬುಧವಾರ ನಾಶ ಯೋಗ. ಗುರುವಾರ ಮೃತ್ಯುಯೋಗ. ಶುಕ್ರವಾರ ಶೂಲಯೋಗ. ಶನಿವಾರ ಪೀಡಾಯೋಗ ಅನುರಾಧ ನಕ್ಷತ್ರದಲ್ಲಿ ಕ್ರೂರಗ್ರಹಗಳಿದ್ದರೆ ಮಹಾಶೂಲಯೋಗ. ಇವು ಹೆಸರಿಗೆ ತಕ್ಕ ಫಲಗಳನ್ನು ಕೊಡುವವು ಫಾಲ್ಗುಣ ಮಾಸದಲ್ಲಿ ಶೂನ್ಯ ಫಲ ಗೋಚಾರಫಲವು ಅಶ್ವಿನಿ ನಕ್ಷತ್ರ ದಂತೆಯೆ ಚಂದ, ಗರ್ಭ ಚಕ್ರದಲ್ಲಿ ಭರಣಿಯು ಶೂಲವನ್ನು ಹತ್ತಿದಾಗ (ಕ್ಷೀಣ ಚಂದ್ರನು ಭರಣಿ ನಕ್ಷತ್ರದಲ್ಲಿ ಪ್ರವೇಶವಾದಾಗ) ರೋಗವಾದರೆ ರೋಗಿಯು ಮರಣ ಹೊಂದುವನು. ಉತ್ಪಾತ ಶೀತ, ಜ್ವರ, ದುರ್ಭಿಕ್ಷ, ಕ್ಷಾಮ, ಸಂಕ್ರಮಣವಾದರೆ ಮಧ್ಯಮ. ಕನ್ಯಾರಾಶಿಯನ್ನು ರವಿ ಪ್ರವೇಶಿಸಿರುವಾಗ ಮರಣ ಹೊಂದಿದರೆ ಆ ಮನೆಯಲ್ಲಿ ಪೀಡೆ ವಾಸವಾಗುವುದು. ಪ್ರಥಮ ರಜಸ್ವಲೆ ಯಾದರೆ ಪತಿ, ಪುತ್ರಹೀನಳಾಗುವಳು. ಶಾಂತಿ ಮಾಡಲು ಕ್ಷೇಮ ೬ ತಿಂಗಳ ವರೆಗೆ ಸಂಭೋಗ ಬಿಡಬೇಕು ಈ ನಕ್ಷತ್ರದಲ್ಲಿ ಮಳೆ ಬೆಳೆಗಳು ಹೆಚ್ಚುವವು. ದಾನ ಧರ್ಮ ಪರೋಪಕಾರ್ಯಗಳನ್ನು ಮಾಡಿದರೆ ಪಾಪ ಪರಿಹಾರ. ಜೇಷ್ಠದಲ್ಲಿ ರವಿ, ರೇವತಿಯಲ್ಲಿ ಕುಜ, ಶತತಾರದಲ್ಲಿ ಗುರು, ಶ್ರವಣದಲ್ಲಿ ಶನಿ, ಪುಷ್ಯದಲ್ಲಿ ಬುಧ, ಮಘಾದಲ್ಲಿ ರಾಹು, ಆರಿದ್ರದಲ್ಲಿ ಶುಕ್ರ, ಧನಿಷ್ಠದಲ್ಲಿ ಪೂರ್ಣ ಚಂದ್ರನು ಇರುವಾಗ ಭರಣಿ ನಕ್ಷತ್ರವು ಲತ್ತಾ ದೋಷವನ್ನುಂಟು ಮಾಡುವುದು. ಭರಣಿ ನಕ್ಷತ್ರದಲ್ಲಿ ಮರಣ ಹೊಂದಿದರೆ ವರ್ಷದೊಳಗಾಗಿ ಪುನಃ ಮರಣ ವಾಗುವುದು. ಹುಟ್ಟಿದವನು ಚಪಲ ಚಿತ್ತನು. ಶೌಚಾಚಾರ ಹೀನನು. ಉಷ್ಣ ಶರೀರ. ವಿದ್ವಾಂಸನ ಮಗನು. ಅಹಂಕಾರಿ. ದೀರ್ಘಾಯುಷ್ಯನು ಸತ್ಯಶಾಲಿ. ಸ್ತ್ರೀಯರಲ್ಲಿ ಅನುರಾಗಿ. ನಾನಾತರದ ಕೈ ಕಸಬುಗಳನ್ನು ಬಲ್ಲವನು.

ಉದಾರಿಯು, ಹೆಚ್ಚು ನಿದ್ರೆಯುಳ್ಳವನು, ಕೆಂಗಣ್ಣು, ಉಂಗುರುಗೂದಲು, ನಾಭಿಸಮೀಪದಲ್ಲಿ ಸೂಕ್ಷ್ಮ ಮತ್ಸ್ಯರೇಖೆಯುಳ್ಳವನು ತೊಡೆಗಳ ನೋವಿನಿಂದ ಬಳಲುವವನು.

ಮೊದಲನೆ ಪಾದಕ್ಕೆ ರವಿ ಅಧಿಪತಿ. ರಾಜಾಂಶ, ಗುಣಶಾಲಿ, ಧೈರ್ಯ, ಸಾಹಸ ಯುದ್ಧ, ವಾದದಲ್ಲಿ ಜಯ, ಸತಿ,ಸುತ, ಮಿತ್ರರಿಂದ ಸುಖ, ಧನ, ಧಾನ್ಯದಿಂದೊಡಗೂಡಿದವನು. ೨ನೇ ಪಾದಕ್ಕೆ ಬುಧ ಅಧಿಪತಿ, ನಪುಂಸಕನ ಸಮಾನದ ವರ್ತನೆ, ಜಿಪುಣ, ಮೋಸ, ಸುಳ್ಳು, ಸ್ತ್ರೀಯರಿಂದ ಗೆಲ್ಲಲ್ಪಟ್ಟವನು, ವ್ಯಾಪಾರ, ವ್ಯವಹಾರದಲ್ಲಿ ಮಿಶ್ರಿತ. ಪಂಡಿತನು, ೩ನೇ ಪಾದಕ್ಕೆ ಶುಕ್ರನು ಅಧಿಪತಿ, ನಿರ್ಭಯ, ಉತ್ಸಾಹ, ಧೈರ್ಯ, ಸಾಹಸಿ ವಿದ್ಯಾವಂತ. ನಾಲ್ಕನೆ ಪಾದಕ್ಕೆ ಕುಜ ಅಧಿಪತಿ. ಕಠಿಣವಚನ, ಕೆಟ್ಟಸ್ವಭಾವ, ದರಿದ್ರ ಕಷ್ಟ ಸಹಿಷ್ಣು, ಹೆಚ್ಚು ಸಂತಾನ, ಕೈಗೂಡಿದ ಫಲಕಾರ್ಯಗಳನ್ನು ಕೆಡಿಸುವವನು.

ರಾತ್ರಿ ಭರಣಿನಕ್ಷತ್ರವಿದ್ದಾಗ ಹುಟ್ಟಿದರೆ ರಾಜಯೋಗ, ಹಗಲು ರಾಜಯೋಗ ಭಂಗ, ಅಮವಾಸೆಯದಿನ ವಿದ್ದಾಗ ಹುಟ್ಟಿದರೆ ಭೂಪಾಲ ( ಅರಸ, ದೊಡ್ಡ ಜಮೀನ್ದಾರ,) ಹುಣ್ಣಿಮೆಯದಿನ ವಿದ್ದಾಗ ಹುಟ್ಟಿದರೆ ಕೆಟ್ಟಸ್ವಭಾವನು, ಗುರು, ಚಂದ್ರರು ಕೂಡಿದ್ದರೆ ಸರಕಾರ ಅಧಿಕಾರದಿಂದ ಜೀವನ, ಶನಿ, ಚಂದ್ರರು ಕೂಡಿದ್ದರೆ ಸೇವಾವೃತ್ತಿ ಕುಜನಿದ್ದರೆ ದ್ವಾರಪಾಲಕ, ಬುಧನಿದ್ದರೆ ವ್ಯಾಪಾರ ವ್ಯವಹಾರಿ, ರವಿಕೂಡಿದ್ದರೆ ಭೈಷಜ್ಯಾಕರ್ಮ, ಶುಕ್ರನಿದ್ದರೆ ಸ್ತ್ರೀಮೂಲಕ ಧನಲಾಭ, ರಾಹು, ಕೇತು ಕೂಡಿದ್ದರೆ ತಾಂತ್ರಿಕ ಕಾರ್ಯಗಳಿಂದ ಜೀವಿಸುವನು.

ಭರಣಿನಕ್ಷತ್ರಕ್ಕೆ ೨೦ ವರ್ಷಗಳು ಶುಕ್ರದಶಾ ಪ್ರಾರಂಭವಾಗುವುದು..ಉಳಿದದಶಗಳು ಅನಂತರದಲ್ಲಿ ಕ್ರಮವಾಗಿ ಬರುವವು. ೧ ನೇ ತಿಂಗಳು, ೪ ನೇ ವರ್ಷಗಳಲ್ಲಿ ಅಪಮೃತ್ಯು ೧೧, ೧೨ ರಲ್ಲಿ ಅಗ್ನಿಭಯ. ೭೦ ರಲ್ಲಿ ಮೇಹರೋಗ ೨೭ ರಲ್ಲಿ ಶತೃಗಳಭಯ, ೩೭ ರಲ್ಲಿ ಜ್ವರಾದಿ ಶೀತ ರೋಗ, ೫೦ ರಲ್ಲಿ ಅಪಮೃತ್ಯು, ೨೦ ರಲ್ಲಿ ಶತೃಗಳಿಂದ ಕಷ್ಟ. ಅಥವಾ ಗುಲ್ಮರೋಗ. ೭೬ ರಲ್ಲಿ ಮೃಗಗಳಿಂದ ಭಯ. ಶುಭಗ್ರಹಗಳ ದೃಷ್ಟಿಯೋಗದಿಂದ ಈ ಕಂಟಕಗಳು ಪರಿಹಾರವಾದರೆ ೯೦ ವರ್ಷ ಪರಮಾಯುಃ. ಈ ರೀತಿಯಾಗಿ ಭರಣಿ ನಕ್ಷತ್ರವಿಚಾರ ತಿಳಿಯುವುದು.

---

## ಕೃತ್ತಿಕಾ ನಕ್ಷತ್ರದ ಗುಣಕರ್ಮಾದಿಗಳ ವಿವರ.

ಇದಂ ಕೃತ್ತಿಕಾ ನಕ್ಷತ್ರಂ, ರಕ್ತವರ್ಣಂ, ಕ್ಷುರಕೃತ್ತಿಕಾಪಡಿತಿಸೂತ್ರಾನುಸಾರೇಣ ಷಟ್ತಾರಂ,ಕ್ಷುರಾಕೃತಿಃ ಅ, ಇ, ಉ, ಏ, ಇತ್ಯಕ್ಷರಾವಳಿಕಂ ಸ್ತ್ರೀ ರೂಪಂ, ಬ್ರಾಹ್ಮಣ ಜಾತೀಯಂ, ರಾಕ್ಷಸ ಗಣಾತಃ ಪ್ರವಿಷ್ಟಂ, ಅಧೋಮುಖಂ ಸುಲೋಚನಂ, ಸಾಧಾರಣಸಂಜ್ಞಂ,೩೦ ತಂ ಸಪುತಾರಂ, ಅಗ್ನಿಮಂಡಲಂ, ಶೂನ್ಯ ಸ್ಥಾನಂ, ತ್ರಿಪಾದಃ, ಅಸ್ಯ ನಕ್ಷತ್ರಸ್ಯ, ಔದುಂಬರ ವೃಕ್ಷಂ ಮಯೂರಪಕ್ಷಿ, ರಾಕ್ಷಸಗಣಃ, ಅಜಯೋನಿ, ಅಂತ್ಯನಾಡಿ, ಉದರರಜ್ಜು. ಪುಂಯೋನಿ, ಪ್ರಥಮಪಾದಸ್ಯ ಕ್ಷತ್ರಿಯಜಾತಿ. ದ್ವಿತೀಯಾದಿಪಾದೆ ವೈಶ್ಯಜಾತಿ, ಉದರರಜ್ಜು. ಪ್ರಥಮಪಾದಸ್ಯಕುಜಃ ದ್ವಿತೀಯಾದಿಪಾದಸ್ಯ ಶುಕ್ರಃ

ಪುಂಯೋನಿ, ಸಿಹ್ಮಾಯುಃ ವೈಶ್ಯಜಾತಿ, ಗರುಡಪಕ್ಷಿ, ಪರಾಹಿದೇವತಾ, ಮರೀಚಗೋತ್ರ ಅಸ್ಮಿನ್ ಕೃತ್ತಿಕಾನಕ್ಷತ್ರೆ ಆಧಾನಹೋಮ ಮುಖಸಾಧನ ಯೂಪಕರ್ಮಹ್ಯಾಸಂ ವಿಧಾತೃ ವಿಹಿತಾಭರಣಾಕರ್ಮ॥ಮಂತ್ರೌಷಧಿಘನರಸಾಯನ ಸಾಧನಾನಿ ಸಿಧ್ಯಂತಿ ಹಿ ವಿಪಿತಾನಿಯುತಾನಿನರ್ಕ್ಷೆ | ಅಸ್ಮಿನ್ನಕ್ಷತ್ರೆ ಆಸಿದ್ಧಯೋಜನಾಃ, ತ್ರಿಂಶದ್ಘಟಿಕಾನಂತರಂ ಚತುಷ್ಘಟಿಕಾಪರ್ಯಂತಂ ವಿಷನಾಡಿ, ಅಷ್ಟಘಟಿಕಾಮಾರಭ್ಯ ಚತುರ್ಘಟಿಕೇ ಅಮೃತಂ, ಯಾತ್ರಾವರ್ಜಂ,ಅತ್ಯಾವಶ್ಯಕಪ್ರಯಾಣೇವಿಂಶದ್ಘಟಿಕಾನಂತರಂ ದಧಿಭುಕ್ತ್ವಾ ಪ್ರಾಗುದಕ್ಷು ಯಾಣಕೃತೆ ದೋಷೋನಾಸ್ತಿ ॥ ಕೃತ್ತಿಕಾಸುಜ್ವರೋತ್ಪತ್ತೌ ಪಿತ್ತೋತ್ಪನ್ನಭಯಃ, ದ್ವಾದಶದಿನಾರಿಷ್ಟಂ, ರವಿವಾರೆ ಕೃತ್ತಿಕಾಜ್ವರೋತ್ಪತ್ತೌ ವಿಂಶದ್ದಿನಾರಿಷ್ಟಂ, ಸೋಮವಾರೆ ದ್ವಾದಶದಿನಾನಿ,ಮಂಗಳವಾರೆ ರೋಗೋತ್ಪತ್ತೌ ಸಪ್ತವಿಂಶದ್ದಿನಾನಿ, ಬುಧವಾರೆ ಷೋಡಶ,ಗುರುವಾರೆ ವಿಂಶತಿ, ಭೃಗುವಾರೆ ಅಷ್ಟಾದಶದಿನಾನಿ, ಮಂದವಾರೆ ಕೃತ್ತಿಕಾ ಯುಕ್ತ ಕಾಲೆ ಜ್ವರೋತ್ಪತ್ತೌ ಮಾಸಾರ್ಧಾರಿಷ್ಟಂ, ತಚ್ಛಾಂತಿಸ್ತು॥ ದ್ವಿಭುಜಂ ರಕ್ತವರ್ಣಾಂಚ ವರಾಭಯಕರದ್ವಯಂ ॥ ಮೇಷಾರೂಢಂ ಶಕ್ತಿಹಸ್ತಂ ರಕ್ತಚಂದನಧಾರಿಣಃ ॥ ಅಗ್ನಿಮಾರಾಧಯೇತ್ ॥ ರಕ್ತಗಂಧಕರವೀರಪುಷ್ಪಘೃತಗುಗ್ಗುಲಧೂಪತೈಲದೀಪಘೃತಾನ್ನನೈವೇದ್ಯಾನಿ,ಮಂತ್ರಸ್ತು"ಅಗ್ನಿನಾಗ್ನಿ ಸ್ಸಮಿಧ್ಯತೆ- ಹೃಸ್ಯಃ" ಇತಿವೇದಮಂತ್ರೇಣ ಷೋಡಶೋಪಚಾರೈಸ್ಸಂಪೂಜ್ಯ ಘೃತೇನಸಮಿಧುನಾ ಅಗ್ನಿಗಾಯತ್ರ್ಯಾ ಮಷ್ಟೋತ್ತರಶತಂಹುತ್ವಾ ॥ ಗಂಧಮಾಲ್ಯೈಶ್ಚ ಅಭ್ಯರ್ಚ, ದಧ್ಯೋದನ, ಗುಡೋದನ್ನ ರಕ್ತಾನ್ನ ಬಲಿಂಹರೇತ್. ದ್ವಾದಶಾಹಾತ್ಸುಖೀಭವತಿ ॥ ರಕ್ತಧೇನುಂದದ್ಯಾತ್, ಯೋಗಾಸ್ತು, ನಂದಾಯಾಂ ಸಿರ್ಜೀವಯೋಗಃ, ರವಿವಾರೆ ಧೂಮ್ರಯೋಗಃ, ಸೋಮವಾರೆ ನಾಶಯೋಗಃ, ಕುಜವಾರೆ ಯಮಕಂಟಕಯೋಗಃ, ಬುಧವಾರೆ ಸಿದ್ಧಯೋಗಃ, ಗುರುವಾರೆ ನಾಶಯೋಗಃ, ಭೃಗುವಾರೆ ಶೂಲಯೋಗಃ, ಶನಿವಾರೆ ಶುಭಯೋಗಃ, ಶನಿಪಂಚಮಿಕೃತ್ತಿಕಾಯು ಕ್ರೂರಣಯೋಗಃ, ವೈಶಾಖಮಾಸೆ ಶೂನ್ಯನಕ್ಷತ್ರಂ, ಕೃತ್ತಿಕಾಸ್ಥಿತೆ ಚಂದ್ರಮಸಿಉತ್ಪಾತದರ್ಶನೆದುರ್ಭಿಕ್ಷಾಗ್ನಿಜ್ವರಭಯಂ, ಕನ್ಯಾಪ್ರಥಮ ರಜಸ್ವಲಾಚೇತ್, ದರಿದ್ರದುಃಖಾನುಭವತಿ ॥ ಭಾಂಡೆಷ್ಟಕಾದಿದಾಹಃ, ಧಾತುವಾದ, ಲೋಹತಪನ, ಸುವರ್ಣಪುಟಪಾಕೆ, ರಸವಾದ,ಋಣವಿಮೋಚನ, ಆಗ್ನೇಯದ್ರವ್ಯಸಂಗ್ರಹಂ, ಪಶುವಿಕ್ರಯಣೆ, ಕಂಟಕವೃಕ್ಷಸ್ಥಾಪನೆ ಕ್ರೂರಮಂತ್ರಜಪಃ ಯಜ್ಞಾದಿಕಾರ್ಯೇಷು ಪ್ರಶಸ್ತಂ ಸ್ತ್ರೀಸಂಭೋಗ,ನಾಮಕರಣ ಅನ್ನಪ್ರಾಶನ ಚೌಲೋಪನಯನ,ಅಕ್ಷರಾಭ್ಯಾಸ,ವೇದಶಾಸ್ತ್ರಾರಂಭ ತೈಲಾಭ್ಯಂಗನ,ನವವಸ್ತ್ರಾಭರಣ, ಅನಿಷ್ಟಂಭವತಿ ॥

ಪ್ರಥಮರಜಸ್ವಲಾ ಮಾಸತ್ರಯಸಂಭೋಗವರ್ಜಂ, ಕೃತ್ತಿಕಾಪರ್ವ ಅಗ್ನಿಭಯಂ ಪುಣ್ಯಾಹರಣಕರ್ಮಣಿ ಪಾಪಕ್ಷಯಃ, ಮೂಲಾಯಾಂರವಿಃ, ಅಶ್ವಿನ್ಯಾಂಕುಜಃ, ಪೂರ್ವಾಭಾದ್ರಗುರುಃ, ಧನಿಷ್ಠಾಯಾಂಶನಿಃ, ಆಶ್ಲೇಷಾಬುಧಃ, ಪುಬ್ಬರಾಹುಃ, ಪುನರ್ವಸೂಶುಕ್ರಃ, ಶತಭಿಷೇಚಂದ್ರಃ, ಕೃತ್ತಿಕಾನಕ್ಷತ್ರಸ್ಯ ಲತ್ತಾಪ್ರದೋಭವತಿ, ಕೃತ್ತಿಕಾನಕ್ಷತ್ರೆ ಮರಣೆ ಸತಿತ್ರಿಮಾಸಪರ್ಯಂತರಂ ತದ್ದ್ವಾರವರ್ಜಂ, ಶನಿಭೌಮವಾರಯುಕ್ತ,ಕೃತ್ತಿಕಾನಕ್ಷತ್ರೆಮರಣೆ ಸತಿವತ್ಸರಾಂತೆ ಪಾಪಪ್ರಾಣ್ಯಂತಗ ಮರಣಾತ್ಪಾತ್ ಶಾಂತಿಃಕರ್ತವ್ಯಂ

ಕೃತ್ತಿಕಾಚರಣ ಪುಂಯುಗ್ಮಜನನೆ ಪಿತ್ರಾರಿಷ್ಟಂ, ಸ್ತ್ರೀಯುಗ್ಮಜನನೆ ಮಾತೃ

ರಿಷ್ಟಂ ಶಾಂತಿಃ|| ಕರ್ತವ್ಯಾ ಕೃತ್ತಿಕಾ ನಕ್ಷತ್ರಸ್ಯ ಅಗ್ನಿ ಪ್ರಧಾನ ದೇವತಾ | ಬ್ರಹ್ಮ ಪ್ರತ್ಯಧಿದೇವತಾ ಜನನ ರೋಗೋತ್ಪತ್ತಿ ಕಾಲೇವಾ ಕರ್ತವ್ಯಂ ||

ಕೃತ್ತಿಕಾ ನಕ್ಷತ್ರ ಜಾತಃ, ಮತಿಮಾನ್, ಖ್ಯಾತ, ಬಹು ಯಶಸ್ವಿ ಪ್ರಮದಾ ಪ್ರಿಯಃ, ರೋಷಪ್ರತಾಪವಾನ್, ಸ್ವಾರ್ಜಿತಧನ ಜೀವನಃ, ಸಿತಕೇಶಃ, ವಾಯು-ಭೀರುಃ ತಿಲ ಮತ್ಸ್ಯಾಂಕಿತಃ || ಪ್ರಥಮ ಪಾದಸ್ಯ ಗುರುಃ, ಕಾರ್ಯದಕ್ಷಾಂಶಃ, ಕುಶಲಃ, ಬಂಧುಪ್ರಿಯಃ, ಪರೋಪಕಾರ ತೇಜಸ್ವೀ || ಬಹುಭೃತ್ಯೋ ಧನೀಭೋಗೀ ಪಿತೃಭಕ್ತೋ ಮಹೋದ್ಯಮೀ || ಜಮೂನಾಥೋ ರಾಜಸೇವೀ ಕೃತ್ತಿಕಾ ಪ್ರಥಮಾಂಶಗೆ, ದ್ವಿತೀಯಪಾದಸ್ಯಶನಿಃ|| ಕರ್ಮಕತ್ರ್ಯಂತಃ, ಸಂಸ್ಕಾರಹೀನಃ ಧೃಷ್ಟಶರೀರಃ, ಮಂದಭಾಷೀ, ಕೃಪಣಃ ಸ್ವಜನದ್ವೇಷೀ. ಗಂಧ ಮಾಲ್ಯಾಪ್ರಿಯಸ್ಸದಾ || ಗುಪ್ತವಾದೀ ಕಳಾಭಿಜ್ಞೋ ವಹ್ನಿ ನಕ್ಷತ್ರಾಂಶ ಗೋದ್ಭವಃ || ತೃತೀಯ ಪಾದಸ್ಯಶನಿಃ || ಕ್ರೂರಾಂಶಃ, ಕ್ರೋಧವಾನ್, ವ್ಯಸನೀ, ದುರ್ಮತಿಃ, ಮಾರಕಃ, ಪಾಪಕರ್ಮರತೋನಿತ್ಯಂ ಶೌಚಾಚಾರ ವಿವರ್ಜಿತಃ| ಹಿಂಸಾಪರೋಪ್ರಗಲ್ಭ ಶ್ಚ ಕೃತ್ತಿಕೇಚತೃತೀಯಗೆ | ಚತುರ್ಥ ಪಾದಸ್ಯ ಅಧಿಪತಿ ಗುರುಃ, ವಿದ್ವಾಂಸಃ, ಮತಿಮಾನ್ ತೇಜಸ್ವೀ, ಶ್ರೀಮಾನ್ ಕುಶಲಃ, ದೇವಬ್ರಾಹ್ಮಣ ಭಕ್ತಿಶ್ಚ ಸದಾಚಾರ ರತಸ್ಸುಖೀ || ಸರ್ವೇಷಾಮುಪಕಾರೀಚ ಕೃತ್ತಿಕಾಂತೇಸಮುದ್ಭವಃ || ಕೃತ್ತಿಕಾ ನಕ್ಷತ್ರಸ್ಯ ರವಿಮಹರ್ದಶಾ ಷಡ್ವತ್ಸರಃ | ಭುಕ್ತಿ ಸ್ತ್ರಯೋ ಮಾಸಾಃ | ಅಷ್ಟದಶದಿನಾನಿ || ಕೃತ್ತಿಕಾಜಾತಸ್ಯ ಮಾಸತ್ರಯೇ ಜ್ವರಭಯಂ ವರ್ಷಾಂತೇ ಶೀತಜ್ವರ | ದ್ವಿವರ್ಷಾಂತೇ ವಿಷಜಂತುಭಯಂ| ಪಂಚಮೆ ಸಪ್ತಮೆದ್ವಾದಶೇ ವಾತ ಪಿತ್ತಜ್ವರ || ಏಕವಿಂಶತಿವತ್ಸರೆ ಅಪಮೃತ್ಯು | ಷಷ್ಟಿ ವರ್ಷೇ ಶತ್ರುಭಯಂ | ಸಪ್ತತಿವರ್ಷೇ ಶಸ್ತ್ರ ಭಯಂ ||ನೇತ್ರರೋಗಶ್ಚ ! ತತ್ಪರಿಹಾರೇ ಸತಿ ಆಶೀತ ವರ್ಷಾಣಿ ಪರಮಾಯು ||ರುದ್ರಾಗ್ನಿ ಯೋಗಸಾಧನೆ ಅಮಿತಮಾಯು ||

ಟೀಕು:- ಈ ಕೃತ್ತಿಕಾನಕ್ಷತ್ರವು ರಕ್ತವರ್ಣ, ಕತ್ತಿಯಾಕಾರದ (೩ ನಕ್ಷತ್ರಗಳ ಎರಡುಸಾಲಿನ ಕೋಣಾಕೃತಿ ಯುಳ್ಳದ್ದು)೬ ನಕ್ಷತ್ರಗಳು ಅ, ಇ, ಉ, ಏ, ಈ ನಾಲ್ಕು ಗುರುತುಗಳುಳ್ಳದ್ದು ಸ್ವರಾಕ್ಷರಗಳುಳ್ಳದ್ದು ಸ್ತ್ರೀರೂಪ, ಬ್ರಾಹ್ಮಣಜಾತಿ, ರಾಕ್ಷಸ ಗಣ ಕೆಳಮುಖವುಳ್ಳದ್ದು, ಒಳ್ಳೆ ನೇತ್ರಗಳು, ಸಾಧಾರಣ ಸಂಜ್ಞೆ, ಅಗ್ನಿಅಧಿಪತಿ ಶೂನ್ಯಸ್ಥಾನ ತ್ರಿಪಾದಿ, ಬನ್ನಿಯಮರ, ನವಿಲು, ರಾಕ್ಷಸಗಣ, ಮೇಷಯೋನಿ, ಅಂತ್ಯನಾಡಿ, ಒಂದನೇ ಪಾದಕ್ಕೆ ಕ್ಷತ್ರಿಯಜಾತಿ, ಎರಡನೇ ಪಾದಕ್ಕೆ ಶುಕ್ರನಧಿಪತಿ, ವೈಶ್ಯಜಾತಿ, ಗರುಡ ಪಕ್ಷಿ, ವಾರಾಹಿದೇವತಾ, ಮರೀಚಗೋತ್ರ ೨ ನೇ ಪಾದದಿಂದ ವೃಷಭರಾಶಿ, ಈ ನಕ್ಷತ್ರದಲ್ಲಿ ಆಧಾನಹೋಮ, ಯಜ್ಞ, ಅಡಿಗೆಕೆಲಸ, ಒಡವೆ,ಆಭರಣ, ಮಾಡುವುದು, ಮಂತ್ರ ಔಷಧ, ರಸಾಯನಗಳನ್ನು ಸಾಧಿಸುವಿಕೆ ಮೊದಲಾದ ಅಗ್ನಿಯಿಂದಾಗುವ ಕಾರ್ಯಗಳು ಸಿದ್ಧಿಸುವವು ಅನಿರುದ್ಧನು ಈ ನಕ್ಷತ್ರದಲ್ಲಿ ಹುಟ್ಟಿದನು ೩೦ ಘಳಿಗೆಗಳ ನಂತರ ೪ ವಿಷ ಘಳಿಗೆಗಳು ಇದರಲ್ಲಿಪ್ರಯಾಣಮಾಡಬಾರದು ೮ಘಳಿಗೆ ನಂತರ ೪ಘಳಿಗೆಅಮೃತ ಅತ್ಯಾವಶ್ಯಕವಾಗಿ ಪ್ರಯಾಣಮಾಡಬೇಕಾದರೆ ೨೦ ಘಳಿಗೆಗಳನಂತರ ಮೊಸರನ್ನು ಕುಡಿದು ಪೂರ್ವ, ಉತ್ತರದಿಕ್ಕುಗಳಿಗೆ ಪ್ರಯಾಣಮಾಡಿದರೆ ದೋಷವಿಲ್ಲ. ಈ ನಕ್ಷತ್ರದಲ್ಲಿ ಜ್ವರ ಬಂದರೆ ಪಿತ್ತೋಷ್ಣಭಯ. ೧೨ ದಿನಗಳವರೆಗೆ ಕ್ರೂರ. ರವಿವಾರ ಕೃತ್ತಿಕಾನಕ್ಷತ್ರವಿಷ್ಟ

ದಿವಸ ಜ್ವರ ಬಂದರೆ ೨೦ ದಿನಗಳವರೆಗೆ ಅರಿಷ್ಟ ಸೋಮವಾರವಾದರೆ ೧೨ದಿನ,ಮಂಗಳ ವಾರವಾದರೆ ೧೭ ದಿನ, ಬುಧವಾರವಾದರೆ ೧೬ದಿನ, ಗುರುವಾರವಾದರೆ ೨೦ದಿನ, ಶುಕ್ರ ವಾರವಾದರೆ ೧೮ ದಿನ,ಶನಿವಾರವಾದರೆ ೪೫ ದಿನಗಳವರೆಗೆ ಅರಿಷ್ಟ. ಇದಕ್ಕೆ ಶಾಂತಿಯು ಎರಡುಭುಜ, ಎರಡು ಅಭಯಹಸ್ತ, ಮೇಷ (ಕುರಿ) ವಾಹನ, ಶಸ್ತ್ರಾಯುಧ, ಕೆಂಪು ಬಟ್ಟೆಯಿಂದ ಅಲಂಕರಿಸಿದ ಅಗ್ನಿಪ್ರತಿಮೆಯನ್ನು ಮಾಡಿಸಿ ಕೆಂಪು ಗಂಧ ಕಣಗಿಲೆ ಹೂ, ತುಪ್ಪ, ಗುಗ್ಗುಲಧೂಪ, ಎಣ್ಣೆಯದೀಪ, ತುಪ್ಪನ್ನ ನೈವೇದ್ಯದಿಂದ ಪೂಜಿಸಬೇಕು."ಅಗ್ನಿನಾಗ್ನಿ ಸ್ಸಮಿಧ್ಯತೇಹುಸ್ಸಃ" ಈ ಮಂತ್ರವನ್ನುಚ್ಚರಿಸುತ್ತ ಷೋಡಶೋಪಚಾರ ಪೂಜೆಯನ್ನುಮಾಡಿ ತುಪ್ಪ ಜೇನುತುಪ್ಪಗಳಿಂದ ಅಗ್ನಿಗಾಯತ್ರಿ ಮಂತ್ರದ ಮೂಲದಿಂದ೧೦೮ ಹೋಮಮಾಡಿ ಗಂಧ, ಹೂಗಳಿಂದ ಪೂಜಿಸಿ, ಬೆಲ್ಲದನ್ನ, ಮೊಸರನ್ನ, ಕೆಂಪನ್ನಗಳಬಲಿಯನ್ನು ಹಾಕಬೇಕು. ೧೨ ದಿನಗಳಲ್ಲಿ ಆರೋಗ್ಯ ವುಂಟಾಗುವುದು. ಕೆಂಪುಹಸುವನ್ನು ಯೋಗ್ಯಜಂಗಮ(ಬ್ರಾಹ್ಮಣ)ರಿಗೆ ದಾನಕೊಡಬೇಕು. ನಂದಾತಿಥಿಯಲ್ಲಿ ನಿರ್ಜೀವಯೋಗ ಆದಿತ್ಯವಾರ ಧೂಮ್ರಯೋಗ,ಸೋಮವಾರ ನಾಶಯೋಗ ಮಂಗಳವಾರ ಯಮಘಂಟಕ ಯೋಗ, ಬುಧವಾರ ನಷ್ಟಯೋಗ, ಗುರುವಾರ ನಾಶಯೋಗ, ಶುಕ್ರವಾರ ಶೂಲಯೋಗ ಶನಿವಾರ ಶುಭಯೋಗ,ಶನಿವಾರ ಪಂಚಮಿಯೂ ಕೃತ್ತಿಕಾ ನಕ್ಷತ್ರಯೋಗವೇ ಮರಣ ಯೋಗ ವೈಶಾಖಮಾಸದಲ್ಲಿ ಶೂನ್ಯನಕ್ಷತ್ರ ಚಂದ್ರನು ಕೃತ್ತಿಕೆಯಲ್ಲಿದ್ದರೆ ಉತ್ಪಾತವುಂಟಾದರೆ ದುರ್ಭಿಕ್ಷ, ಅಗ್ನಿ, ಜ್ವರಗಳಭಯ, ಸ್ತ್ರೀಯಳು ಪ್ರಥಮ ರಜಸ್ವಲೆಯಾದರೆ ದಾರಿದ್ರ್ಯ, ದು:ಖವನ್ನನುಭವಿಸುವಳು. ಆವಿಗೆ, ಇಟ್ಟಿಗೆ ಸುಡುವುದು, ಧಾತುವಾದ ಲೋಹಗಳನ್ನು ಕರಗಿಸುವುದು, ಬಂಗಾರಪುಟಕಹಾಕುವದು ಸಾಲತೀರಿಸುವಿಕೆ, ಅಗ್ನಿಸಂಬಂಧವಾದ ಪದಾರ್ಥಗಳನ್ನು ಸಂಪಾದಿಸುವುದು ಪಶುಗಳನ್ನುಮಾರುವುದು.ಮುಳ್ಳಿನಗಿಡ ನೆಡುವುದು,ಕ್ರೂರಮಂತ್ರ, ಯಂತ್ರ ತಂತ್ರ ಜಪಾದಿಯಜ್ಞ ಕಾರ್ಯಗಳಿಗೆ ಪ್ರಶಸ್ತ ಸ್ತ್ರೀಸಂಭೋಗ,ನಾಮಕರಣ, ಅನ್ನಪ್ರಾಶನ, ಚೌಲಕಾರ್ಯ, ಅಕ್ಷರಾಭ್ಯಾಸ, ವೇದ, ಶಾಸ್ತ್ರಾದಿಪುರಾಣಗ್ರಂಥಗಳ ಅಭ್ಯಾಸ, ತೈಲಾಭ್ಯಂಗನ, ಹೊಸಬಟ್ಟೆ, ಆಭರಣ ಅಲಂಕಾರಗಳಿಗೆ ಈ ನಕ್ಷತ್ರದಲ್ಲಿ ಅನಿಷ್ಟಸಂಭವಿಸುವುದು.

ಈ ನಕ್ಷತ್ರದಲ್ಲಿ ರಜಸ್ವಲೆಯಾದವಳನ್ನು ೩ ತಿಂಗಳವರೆಗೆ ಸಂಭೋಗಬಿಡಬೇಕು. ಪುಣ್ಯ ಕಾರ್ಯಾಚರಣೆ ಮಾಡುವುದರಿಂದ ಪಾಪವು ನಾಶವಾಗುವುದು. ಮೂಲಾದಲ್ಲಿ ರವಿ ಅಶ್ವಿನಿಯಲ್ಲಿ ಕುಜ, ಪೂರ್ವಾಭಾದ್ರದಲ್ಲಿ ಗುರು ಧನಿಷ್ಠಾದಲ್ಲಿ ಶನಿ, ಆಶ್ಲೇಷದಲ್ಲಿ ಬುಧ, ಹುಬ್ಬಾದಲ್ಲಿ ರಾಹು, ಪುನರ್ವಸುದಲ್ಲಿ ಶುಕ್ರ. ಶತತಾರದಲ್ಲಿ ಚಂದ್ರನಿದ್ದರೆ ಕೃತ್ತಿಕಾ ನಕ್ಷತ್ರವು ಉತ್ಪಾತದೋಷವಾಗುತ್ತದೆ. ಈ ನಕ್ಷತ್ರದಲ್ಲಿ ಮರಣವಾದರೆ ೩ ತಿಂಗಳವರೆಗೆ ಆ ಮನೆಯನ್ನು ಬಿಡತಕ್ಕದ್ದು ಶನಿವಾರ, ಮಂಗಳವಾರ ಕೃತ್ತಿಕಾ ನಕ್ಷತ್ರ ಇದ್ದದಿವಸ ಮರಣವಾದರೆ ಒಂದು ವರ್ಷದೊಳಗಾಗಿ ಇನ್ನೊಂದು ಮರಣವಾಗುವುದು. ಶಾಂತಿಯನ್ನು ಮಾಡಲು ಉತ್ತಮವಾಗುತ್ತದೆ.

ಕೃತ್ತಿಕಾ ನಕ್ಷತ್ರದಲ್ಲಿ ಪುರುಷನು ಜನಿಸಿದರೆ ತಂದೆಗೆ ಅರಿಷ್ಟ. ಹೆಣ್ಣುಹುಟ್ಟಿದರೆ ತಾಯಿಗೆ ಅರಿಷ್ಟ. ಈನಕ್ಷತ್ರದ ಅಧಿಪತಿಯಾದ ಅಗ್ನಿದೇವನನ್ನು, ಪ್ರತ್ಯಧಿದೇವನಾದ ಬ್ರಹ್ಮನನ್ನು ಆರಾಧಿಸಿ ಶಾಂತಿ ಮಾಡಲು ಉತ್ತಮ. ಇದರಲ್ಲಿ ಹುಟ್ಟಿದವನು ಬುದ್ಧಿ ಮಂತ

ಕೀರ್ತಿ. ಯಶಸ್ಸು. ಸ್ತ್ರೀಯರಿಗೆ ಪ್ರೀತಿದಾಯಕನೂ, ಹೆಚ್ಚುಊಟ ಮಾಡುವವನು, ಸಿಟ್ಟು. ಸ್ವಯಾರ್ಜಿತದಿಂದ ಜೀವನ ಸಾಗಿಸುವಿಕೆ, ಬಿಳಿಯ ಕೂದಲ, ವಾಯುರೋಗ ತಿಲಮತ್ಸ್ಯ ಚಿಹ್ನೆ ಯುಳ್ಳವನು.

ಮೊದಲನೆಯ ಪಾದಕ್ಕೆ ಗುರು ಅಧಿಪತಿ. ಕಾರ್ಯ ದಕ್ಷಾಂಶ ಕುಶಲನು ಬಂಧು, ಬಾಂಧವಾದಿ ಆಪ್ತ ಮಿತ್ರರಲ್ಲಿ ಪ್ರೀತಿ, ಪರೋಪಕಾರಿ, ತೇಜಸ್ವಿ. ಎರಡನೆಯ ಪಾದಕ್ಕೆ ಶನಿ ಅಧಿಪತಿ ಕರ್ಮಕರ್ತ ಅಸಂಸ್ಕೃತನು ಪುಷ್ಟ, ಶರೀರ, ಅಲ್ಪ ಭಾಷಿ, ಜಿಪುಣ, ಸ್ವಜನ ದ್ವೇಷಿ, ಅಲಂಕಾರಾದಿ ಪ್ರಿಯವಸ್ತುಗಳಲ್ಲಿ ಪ್ರೀತಿ ಯುಳ್ಳವನು. ಮೂರನೆಯ ಪಾದಕ್ಕೆ ಶನಿ ಅಧಿಪತಿ ಕ್ರೂರಾಂಶ. ಕೋಪ, ಗ್ಲಾನಿ. ದುಷ್ಟಬುದ್ಧಿ ಮಾರಕ, ಪಾಪಕಾರ್ಯಾಸಕ್ತನು, ಅಶುಚಿ, ಹಿಂಸೆಯುಳ್ಳವನು. ನಾಲ್ಕನೆಯ ಪಾದಕ್ಕೆ ಗುರು ಅಧಿಪತಿ ವಿದ್ಯಾವಂತ, ಬುದ್ಧಿವಂತ, ಪ್ರಕಾಶಿತನು. ಗುರುದೇವತಾ ಹಿರಿಯರಲ್ಲಿ ಭಕ್ತಿ, ಸದಾಚಾರಿಯಾಗುವನು.

ಈ ನಕ್ಷತ್ರದಲ್ಲಿ ಹುಟ್ಟಿದವನಿಗೆ ೬ ವರ್ಷ ರವಿದಶ, ೧೮ದಿನ, ೩ ತಿಂಗಳು, ೨ವರ್ಷಗಳಲ್ಲಿ ವಿಷಜಂತು, ಜ್ವರ,ಶೀತಜ್ವರ, ಭಯ, ೫, ೭, ೧೨ರಲ್ಲಿ ವಾತ, ಪಿತ್ಥಜ್ವರ, ೨೧ರಲ್ಲಿ ಅಪಮೃತ್ಯು, ೬೦ರಲ್ಲಿ ಶತ್ರು ವರ್ಗದವರಿಂದ ಕಷ್ಟ, ೭೦ರಲ್ಲಿ ನೇತ್ರರೋಗ, ಶಸ್ತ್ರಭೀತಿ ಇವು ಪರಿಹಾರವಾದರೆ ೮೦ ವರ್ಷ ಪರಮಾಯು. ರುದ್ರಾಗ್ನಿ ಯೋಗಸಾಧನೆಗಳನ್ನು ಮಾಡಿದರೆ ಅಪರಿಮಿತ ಆಯುಷ್ಯ ವುಂಟಾಗುವುದು.

### ಇತಿ ಕೃತ್ತಿಕಾ ನಕ್ಷತ್ರ ಗುಣಕರ್ಮಾದಿಗಳ ವಿಚಾರ ವಿರಾಮಃ

## ರೋಹಿಣಿ ನಕ್ಷತ್ರದ ಗುಣಕರ್ಮಾದಿಗಳ ವಿವರ.

ಇದಂ ರೋಹಿಣಿ ನಕ್ಷತ್ರಂ ಕೃಷ್ಣವರ್ಣಂ ರೋಹಿಣಿ ಶಕಟಾಕಾರಂ ಪಂಚ ಇತಿ ಸೂತ್ರಾನುಸಾರೇಣ ಪಂಚ ತಾರಕಂ | ಶಕಟಾಕೃತಿ: ಓ. ವಾ. ವಿ. ವು. ರೋಹಿಣಿ ಇತ್ಯಕ್ಷರಾವಳಿಕಂ. || ಪುಂ ರೂಪಂ, ಪೂರ್ಧ್ವಮುಖಂ, || ಅಂಧಲೋಚನಂ, ಸಿದ್ಧಂ ಇಂದ್ರಮಂಡಲಂ, ಮಧ್ಯತಾರಂ||ಪಟ್ಟಣಸ್ಥಾನಂ ಚತುಷ್ಪಾತ್ ಸ್ಥಿರಸಂಜ್ಞಕಂ| ಮನುಷ್ಯ ಗಣ: | ಸರ್ಪಯೋನಿ || ವೃಷಭರಾಶಿ, ಶುಕ್ರಗ್ರಹಂ, ಕಂಠರಜ್ಜು, ವೈಶ್ಯವರ್ಣಂ, ಅಂತ್ಯ ನಾಡಿ, ಶೂದ್ರಜಾತಿ |ಮರೀಚಿಗೋತ್ರಂ, ಗರುಡದೇವತಾ, ಪೃಥ್ವೀತತ್ವಂ, ಸ್ತ್ರೀಲಿಂಗಂ, ನೈರುತ್ಯಾದಿಕ್ ಸಿದ್ಧಯೋಗಿನೀ,ಜಂಬೂವೃಕ್ಷ:. ಅತ್ಯರ್ಘತಾರಾ| ಉಕಾರರುಕಾಕ್ಷರಸ್ವರ:, ಕೃಷ್ಣಭೀಮಾಜಾತಾ | ಚತ್ವಾರಿಂಶದ್ಘಟಿಕೋಪರಿ ಚತುರ್ಘಟಿಕಾಪರ್ಯಂತಂ ವಿಷೋತ್ಪತ್ತಿ:, ದ್ವಿಪಂಚಾಶದ್ಘಟಿಕೋಪರಿ ಚತುರ್ಘಟಿಪರ್ಯಂತಂ ಅಮೃತೋತ್ಪತ್ತಿಃ| ರಾಜಾಭಿಷೇಕಗ್ರಹಹರ್ಮ್ಯಪುರಪ್ರವೇಶ ಹೋಮಾದಿಶಾಂತಿಕವಿವಾಹವಿಧಿಂಚಕುರ್ಯಾತ್ || ಶಾಲೀಕ್ಷುರಸಸರ್ಪಿಪಾಪಸಾನಿದಿವ್ಯಾಂಬರಾಭರಣ ಭೂಷಣಾಮಂಬುಜಸ್ಥೆ || ಯಾತ್ರಾಯಾಂಪರಮಾನ್ನಭಕ್ಷಣಂ | ಪೂರ್ವೋಕ್ತಾನ್ಯಪಿ ಯಾನಿಶುಭಂಅಸ್ಮಿನ್ನಕ್ಷತ್ರಸ್ಯಪ್ರಧಾನದೇವತಾ ಬ್ರಹ್ಮಾ| ಪ್ರತ್ಯಧಿದೇವತಾಚಂದ್ರ:|| ಅಸ್ಮಿನ್ನಕ್ಷತ್ರೆ ಜ್ವರಪ್ರಾಪ್ತೆ ಸಪ್ತದಿನಾನ್ಯರಿಷ್ಟಾನಿ

ಭಾನುವಾರಯುಕ್ತ,ರೋಹಿಣೀನಕ್ಷತ್ರೇಜ್ವರಪ್ರಾಪ್ತೌ ದಶದಿನಾತ್ಸುಖೀ,ಸೋಮವಾರೆ ಸಪ್ತ ದಿನಾತ್ಸುಖೀ ‖ ಭೌಮವಾರೆ ದ್ವಾದಶದಿನಂ,ಸೌಮ್ಯವಾರೆ ಅಷ್ಟದಿನಂ,ಗುರುವಾರೆ ಷಟ್ ದಿನಂ, ಭೃಗುವಾರೆ ದಶಾದಿನಂ, ಮಂದವಾರೆ ವಿಂಶದ್ದಿನಾನಂತರಂ ಸುಖೀಭವತೀ ‖ ರೋಹಿಣಿನಕ್ಷತ್ರೆ ಜ್ವರಾದಿಬಾಧಾಪ್ರಾಪ್ತೌಸತಿ ‖ ತಚ್ಛಾಂತಿ:, ಕೃಷ್ಣವರ್ಣಂ ಚತುರ್ಭುಜಂ, ಅಕ್ಷಸೂತ್ರಕಮಂಡಲುಧರಂ ಹಂಸವಾಹನಂ ‖ ಬ್ರಹ್ಮರೂಪಂ, ಕೃಷ್ಣಗಂಧಂ, ಕಮಲಪುಷ್ಪಂ, ಸಜ್ಜರಸಧೂಪ:. ಕ್ಷೀರಾನ್ನ ನೈವೇದ್ಯಂ. ಮಂತ್ರಸ್ತು "ನಮೊಬ್ರಹ್ಮಣೆಕರೋಮಿ"‖ ಇತಿಮಂತ್ರೇಣ ಷೋಡಶೋಪಚಾರೈಃಸಂಪೂಜ್ಯ,ಸಹಸರ್ಪಾದಾನ್ಯೈ ಗಾಯತ್ರಿಯಾಪಿ ಪ್ಯೋತ್ತರಶತಂ ಹುತ್ವಾ|ಗಂಧಮಾಲ್ಯೈ: ಕ್ಷೀರೋದನ್ನಬಲಿಂಹರೇತ್, ಸಪ್ತಾಹಾತ್ಸುಖೀ ಭವೇತ್ ‖ ಆದಿವಾರೆ ಶುಭಯೋಗಃ ಸೋಮವಾರೆ ಸ್ಥಿರಯೋಗಃ ಕುಜವಾರೆ ಮಂದಯೋಗ| ಬುಧವಾರೆ ಸಿದ್ಧಿಯೋಗ, ಗುರುವಾರೆ ಮೃತ್ಯಯೋಗ, ಭೃಗವಾರೆ ಯಮಕಂಟಕಯೋಗ, ಶನಿವಾರೆ ಅಪಮೃತ್ಯುಯೋಗ:, ಅಷ್ಟಮಿಬುಧವಾರೆ ಮಹಾಸಿದ್ಧಿಯೋಗ ಷಷ್ಠಿಬುಧವಾರೆ ರುಣಯೋಗ, ಪೂರ್ಣಿಮಾ ಸೋಮವಾರೆ ಅಗ್ನಿಯೋಗ, ಏಕಾದಶ್ಯಾಂ ವಿಷಯೋಗ, ನಂದಾಸು ನಿರ್ಜೀವಯೋಗ. ದಶಮ್ಯಾಂ ಕ್ರೂರಯೋಗ, ಅಭಿಜಿನ್ನಕ್ಷತ್ರೆ ಕ್ರೂರಗ್ರಹಸ್ಥಿತೆ ಮಹಾ ಶೂಲಯೋಗ, ಚೈತ್ರಮಾಸೆ ಶೂನ್ಯ ನಕ್ಷತ್ರಂ, ಅಸ್ಮಿನ್ ನಕ್ಷತ್ರೆ ಉತ್ಪಾತ ದರ್ಶನೆ ಸುಭಿಕ್ಷಂ ಭವತಿ ‖ ಅಸ್ಮಿನ್ ನಕ್ಷತ್ರೆ ಪ್ರಥಮರಜಸ್ವಲಾಕನ್ಯಾ ಪತಿಭಕ್ತ್ಯಾದಿ ಸುಗುಣಯುಕ್ತೇನ ವಿರಾಜತೆ! ವರ್ಷೇಧಾನ್ಯವೃದ್ಧಿರ್ಭವತಿ‖ಪುಣ್ಯಕರ್ಮಾಚರಣೆ ತಕ್ಷಣಸಿದ್ಧಿಂ ‖ ಪೂರ್ವಾಷಾಢಾಯಾಂರವಿ, ಭರಣ್ಯಾಂಕುಜ, ಉತ್ತರಾಭಾದ್ರಯಾಂ ಗುರು, ಶತಭಿಷಾಯಾಂ ಶನಿ, ಮಖಾಬುಧ, ಉತ್ತರೆರಾಹು, ಪುಷ್ಯಮಿಶುಕ್ರ. ಪೂರ್ವಾಭಾದ್ರಾಯಾಂಚಂದ್ರ:, ರೋಹಿಣಿನಕ್ಷತ್ರಜಾತಸ್ಯ ಲತ್ತಾಪ್ರದೋಭವತಿ‖ ರೋಹಿಣ್ಯಾಂಮರಣೆ ವತ್ಸರಾಂತೆಶುಭಕರ್ಮ ಅಥವ ಗ್ರಹಮಧ್ಯೆ ಜನನಂವಾಭವತಿ ‖

ಅಸ್ಮಿನ್ನಕ್ಷತ್ರೆಯಶುಭಜನನೆ ಮಹಾಶಾಂತಿ:, ಪುರುಷಜನನೆ ಮಾತಾಮಹವರ್ಗಾರಿಷ್ಟಂ, ಸ್ತ್ರೀಜನನೆ ಪಿತಾಮಹವರ್ಗಾರಿಷ್ಟಂ,

ರೋಹಿಣೀನಕ್ಷತ್ರಜಾತಪುರುಷ: ‖ ಸುಪಾಣಿ: ಸ್ಕಂದಚಾರುಃ,ಲಲಾಟಸ್ಫುಟಿತ:, ಸ್ವಮಾತೃಮಾತುಲಾರಿಷ್ಟ:, ಸುರೂಪ:, ಸುತಂತ್ರ:, ಸತಪ್ರಿಯಃ. ನಿಪುಣಃ ಧನಧಾನ್ಯಸವೃದ್ಧ:, ನವವಸ್ತ್ರಪ್ರಿಯ:, ನೇತ್ರರೋಗಿ, ಕಿಂಚದ್ಭೀತಃ, ಸ್ತ್ರೀಲೋಲಃ, ರೋಹಿಣಿನಕ್ಷತ್ರ ಪ್ರಥಮಪಾದಸ್ಯ ಅಂಗಾರಕಃಅಧಿಪಃ | ತಸ್ಮಿರಾಂಶೇ. ರಕ್ತರೋಮತನುಃ, ಶೂರಸಿಷ್ಠುರಃ ರೋಹಿಣ್ಯಾಮಾದ್ಯಪಾದೇತು ಕ್ರೂರಕಾರ್ಯರತಸ್ಸದಾ ‖ಕೂಟಸಾಕ್ಷೀಸದಾಕ್ರೂರೊಹೀಶಾಂಗೆಷ್ಟಪಿನಿರ್ಧನಃ ‖ ದ್ವಿತೀಯಪಾದಸ್ಯ ಭೃಗುರಧಿಪತಿಃ ‖ ಭೋಗಾಂಶ:, ದೀರ್ಘಶರೀರಃ,ಜಿತೇಂದ್ರಿಯಃ, ಸುಶೀಲ:,ದ್ವಿತೀಯಪಾದಸಂಭೂತೊ ದೇವತಾತಿಥಿಪೂಜಕ.‖ ಧನೀಭೋಗೀ ತಥಾಕಾಲು ಪಶುಪಾಲಪ್ರಿಯೋಭವೇತ್ ‖ ತೃತೀಯಪಾದಸ್ಯ ಬುಧ ‖ ಸೌಮ್ಯಃಪಂಡಿತಾಂಶಃ, ಕವಿಃ, ಧೀರಃ, ಗಣಕಃ, ತೃತೀಯಾಂಶೆತು ಸಂಭೂತಬಹುಧಾವಿತ್ತಸುಖೀ ‖ ಸರ್ವಾಣಿಶುಭಕಾರ್ಯಾಣಿ ಮಿತ್ರಾಮಿತ್ರಫಲಂಭವೇತ್ ‖ ಚತುರ್ಥಪಾದಸ್ಯ ಚಂದ್ರ:, ಧನಾಂಶ:, ಬಂಧುಪ್ರಿಯಃ,ಪರೋಪಕಾರೀ,ಧೀಮಾನ್ಚತುರ್ಥಪಾದಸಂಭೂತೊ ವಿಷ್ಣುಧರ್ಮಪರಾಯಣ:‖ ಪುಣ್ಯಾನಿಸರ್ವಕಾರ್ಯಾಣಿ ಗುರುಭಕ್ತೊಭವೆನ್ನರಃ‖ ಅಸ್ಮಿನ್ರೋ

ಹಿಣೀನಕ್ಷತ್ರೆ ಜಾತಸ್ಯಚಂದ್ರಮಹರ್ದಶಾವರ್ಷಾಣಿ ದಶ ಚಂದ್ರಅಂತರ್ದಶಾಮಾಸಾನಿದಶ ದಿನೇದಶಘಟಿಕಾಭ್ಯಾಂ ಪರಂಅಪಮೃತ್ಯು || ದಶದಿನಾನಂತರಂ ವಾತಭಯಂ || ಸಪ್ತವರ್ಷೆ ಶೀತವಾತಜ್ವರಾದಿಬಾಧಾ | ದ್ವಾದಶವರ್ಷೆ ಜಲಭಯಂ || ಷೋಡಶಾಬ್ದೆ ಸರ್ಪಭಯಂ|| ಚತುರ್ವಿಂಶದ್ಯಬ್ದೆಸ್ತ್ರೀಮೂಲಕಭಯಂ || ಷಟ್‌ತ್ರಿಂಶಾಬ್ದೆ ಶತೃವರ್ಗಲಕವಾ ದಾಯಾದಿ ಮೂಲಕೇನಯುದ್ಧಭೀತಿಃ, ದ್ವಿಪಂಚಾಶದ್ವತ್ಸರೆಅಪಮೃತ್ಯು ರೋಗಭಾಧಾ–ಷಷ್ಟಿತಮೇ ವತ್ಸರೆ ರಾಜಜನಮೂಲಕಬಾಧಾ || ಷಷ್ಟಿತಮೆವತ್ಸರೆ ಅಪಮೃತ್ಯುಭಯಂ || ತತ್ಪರಿ ಹಾರಃ ಅಷ್ಟಾಶೀತಿಪರಮಾಯುಃ ವರ್ಷಾಣಿ ||

**ಟೀಕೆ—** ಈ ರೋಹಿಣಿ ನಕ್ಷತ್ರವು ಕೃಷ್ಣವರ್ಣ, ಬಂಡಿಯ ಆಕಾರವುಳ (ರೋಹಿಣಿ ಶಕಟ)ಐದು ನಕ್ಷತ್ರಗಳುಳ್ಳದ್ದು.ಓ. ವಾ. ವಿ. ವು. ಎಂಬ ನಾಲ್ಕುನಾಮಾಕ್ಷರಗಳು. ಪುರುಷಾಕೃತಿ, ಊರ್ಧ್ವಮುಖ, ಅಂಧಲೋಚನ, ಇಂದ್ರಮಂಡಲ, ಮಧ್ಯ ತಾರ, ಪಟ್ಟಣವಾಸಸ್ಥಾನ, ನಾಲ್ಕುಪಾದ, ಸ್ಥಿರಸಂಜ್ಞ, ಮನುಷ್ಯಗಣ, ಸರ್ಪಯೋನಿ, ವೃಷಭರಾಶಿ, ಶುಕ್ರಅಧಿಪತಿ, ಕಂಠರಜ್ಜು, ವೈಶ್ಯವರ್ಣ, ಅಂತ್ಯನಾಡಿ, ಶೂದ್ರಜಾತಿ. ಮರೀಚಿಗೋತ್ರ, ಪೃಥ್ವಿತತ್ವ, ಪುರುಷ, ನೈಋತ್ಯದಿಕ್ಕು, ಸಿದ್ಧಯೋಗಿನಿ, ನೇರಳೆಮರ ಅತ್ಯರ್ಘತಾರ, ಉ, ಊಕಾರ ಸ್ವರಗಳುಳ್ಳದ್ದು, ಕುಟಜಪಕ್ಷಿ ಶ್ರೀಕೃಷ್ಣ, ಮತ್ತು ಭೀಮ ಈ ನಕ್ಷತ್ರದಲ್ಲಿ ಹುಟ್ಟಿದರು. ೩೦ಘಳಿಗೆನಂತರ ೪ಘಳಿಗೆ ವಿಷಘಳಿಗೆ, ೧೦ಘಳಿಗೆನಂತರ ೪ಘಳಿಗೆ ಅಮೃತಕಾಲ. ರಾಜಾಭಿಷೇಕ, ಪುರಪ್ರವೇಶ,ಹೋಮ,ಶಾಂತಿ,ವಿವಾಹಕಾರ್ಯ ಛತ್ರ, ಕಬ್ಬು, ಸಾಸಿವೆ, ಇವುಗಳ ಬಿತ್ತನೆ ದಿವ್ಯವಾದ ವಸ್ತ್ರಭೂಷಣಾದಿಗಳನ್ನು ತರ ಲಿಕ್ಕೆಪ್ರಶಸ್ಥ ಪ್ರಯಾಣಮಾಡುವಾಗ ಪರಮಾನ್ನ ತಿಂದು,ಪೂರ್ವ, ಉತ್ತರ ದಿಕ್ಕುಗಳಿಗೆ ಪ್ರಯಾಣಮಾಡಲು ಉತ್ತಮ. ಈ ನಕ್ಷತ್ರದ ಅಧಿಪತಿ ಬ್ರಹ್ಮ, ಅಧಿದೇವತ ಅಗ್ನಿ. ಪ್ರತ್ಯಾಧಿ ದೇವತ ಚಂದ್ರ. ಜ್ವರಬಂದರೆ ೭ ದಿನಗಳವರೆಗೆ ಅರಿಷ್ಟ,ಭಾನುವಾರ ರೋಹಿಣಿ ನಕ್ಷತ್ರವಿದ್ದದಿವಸ ರೋಗಪ್ರಾಪ್ತಿಯಾದರೆ ೧೦ ದಿನಗಳನಂತರ ಗುಣವಾಗುತ್ತದೆ ಸೋಮವಾರವಾದರೆ ೭ ದಿನಗಳ ನಂತರ ಸುಖ. ಮಂಗಳವಾರವಾದರೆ ೧೨ ದಿನ ಬುಧ ವಾರವಾದರೆ ೮ ದಿನಗಳನಂತರ ಆರೋಗ್ಯ, ಗುರುವಾರವಾದರೆ೬ ದಿನಗಳನಂತರ ಸುಖ. ಶುಕ್ರವಾರವಾದರೆ ೧೦ ದಿನಗಳನಂತರ ಗುಣವಾಗುತ್ತದೆ. ಶನಿವಾರವಾದರೆ ೨೦ ದಿನಗಳ ನಂತರ ಆರೋಗ್ಯ ಈ ನಕ್ಷತ್ರದಲ್ಲಿ ಜ್ವರಬಂದರೆ ಶಾಂತಿಕ್ರಮ:– ಕಪ್ಪುಬಣ್ಣ, ನಾಲ್ಕುಭುಜ, ಅಕ್ಷಸೂತ್ರಕಮಂಡಲ, ಹಂಸವಾಹನವುಳ್ಳ ಬ್ರಹ್ಮಪ್ರತಿಮೆಯನ್ನು ಮಾಡಿಸಿ, ಕಪ್ಪುಗಂಧ, ತಾವರೆಹೂ, ಸರ್ಜರಸಧೂಪ, ಹಾಲನ್ನ ನೈವೇದ್ಯ ಮಾಡಿ"ನಮೋ ಬ್ರಹ್ಮಣೇ ಕರೋಮಿ " ಎಂಬ ಮಂತ್ರವನ್ನುಚ್ಚರಿಸುತ್ತ ಷೋಡಶೋಪಚಾರದಿಂದ ಪೂಜೆಯಂ ಮಾಡಬೇಕು. ಗಾಯತ್ರಿ ಮಂತ್ರದಿಂದ ೧೦೮ಸಾಸುವೆಯ ಆಹುತಿಕೊಟ್ಟು ಗಂಧ, ಹೂಗಳೊಡನೆ ಹಾಲನ್ನದ ಬಲಿಯನ್ನು ಕೊಟ್ಟರೆ, ೭ದಿನಗಳಲ್ಲಿ ಸೌಖ್ಯವಾಗುತ್ತದೆ. ಆದಿತ್ಯವಾರ ಈ ನಕ್ಷತ್ರ ಬಂದರೆ ಶುಭಯೋಗ, ಸೋಮವಾರಸ್ಥಿರಯೋಗ ಮಂಗಳವಾರಕುಂದಯೋಗ, ಬುಧವಾರಸಿದ್ಧಿಯೋಗ, ಗುರುವಾರಮೃತ್ಯುಯೋಗ.ಶುಕ್ರವಾರ ಯಮಘಂಟಕಯೋಗ, ಶನಿವಾರಅಪಮೃತ್ಯು ಯೋಗ, ಅಷ್ಟಮಿ ಬುಧವಾರ ಮಹಾ ಸಿದ್ಧಿಯೋಗ, ಷಷ್ಟಿ ಬುಧವಾರಮರಣಯೋಗ, ಪೌರ್ಣಮಿ ಸೋಮವಾರ ಅಗ್ನಿಯೋಗ

ಏಕಾದಶಿ ವಿಷಯೋಗ, ನಂದಾತಿಥಿನಿರ್ಜೀವಯೋಗ, ದಶಮೀತಿಥಿಕ್ರೂರಯೋಗ, ಚೈತ್ರ ಮಾಸದಲ್ಲಿ ಇದು ಶೂನ್ಯನಕ್ಷತ್ರ, ಉತ್ಪಾತಗಳಾದರೆ ಸುಭಿಕ್ಷವಾಗುತ್ತದೆ. ಪ್ರಥಮ ರಜಸ್ವಲೆಯಾದರೆ ಪತಿಭಕ್ತಿಪರಾಯಣಳು, ಸುಗುಣೆಯೂ ಆಗುವಳು. ವೃಷ್ಟಿಯಾದರೆ ಬೆಳೆ ಹುಲುಸಾಗುವದು. ಪುಣ್ಯಕಾರ್ಯಗಳನ್ನು ಮಾಡಿದರೆ ಸಿದ್ಧಿಸುವದು. ಪೂರ್ವಾಷಾಢದಲ್ಲಿ ರವಿ, ಭರಣಿಯಲ್ಲಿ ಕುಜ, ಉತ್ತರಾಭಾದ್ರದಲ್ಲಿ ಗುರು, ಶತತಾರದಲ್ಲಿ ಶನಿ, ಮಘಾದಲ್ಲಿ ಬುಧ, ಉತ್ತರದಲ್ಲಿ ರಾಹು, ಪುಷ್ಯದಲ್ಲಿ ಶುಕ್ರ, ಪೂರ್ವಾಭಾದ್ರದಲ್ಲಿ ಚಂದ್ರನಿದ್ದರೆ ಈ ನಕ್ಷತ್ರವು ಲತ್ತಾದೋಷವನ್ನುಂಟು ಮಾಡುತ್ತದೆ ಅವಳಿ ಮಕ್ಕಳು ಜನಿಸಿದರೆ ಮಹಾಶಾಂತಿಯನ್ನು ಮಾಡಬೇಕು. ಗಂಡು ಕೂಸು ಹುಟ್ಟಿದರೆ ತಾಯಿ, ಮತ್ತು ತಾಯಿಯ ಸೋದರವರ್ಗಕ್ಕೆ (ಸೋದರ ಮಾವಂದರಿಗೆ) ಅರಿಷ್ಟ. ಹೆಣ್ಣು ಕೂಸು ಹುಟ್ಟಿದರೆ ತಂದೆ ಅಥವಾ ತಂದೆಯ ವರ್ಗಕ್ಕೆ ಅರಿಷ್ಟ. ಇದರಲ್ಲಿ ಪುಂಸವನ, ಸೀಮಂತ, ಜಾತಕರ್ಮ, ನಾಮಕರಣ, ಅನ್ನಪ್ರಾಶನ, ಚೌಲಕಾರ್ಯ, ವೇದವ್ರತಾಭ್ಯಾಸ, ವಿವಾಹ, ಹೊಸಬಟ್ಟೆ ಧರಿಸುವಿಕೆ, ಮನೆ, ಗ್ರಾಮ, ಗೃಹಪ್ರವೇಶ, ದೇವತಾಪ್ರತಿಷ್ಠೆ, ಅಜ್ಞಾಧಾನ, ಹೋಮ, ಶಾಂತಿ ಪೌಷ್ಟಿಕಕಾರ್ಯ, ಧನ,ಧಾನ್ಯಸಂಗ್ರಹ, ಕೆರೆ,ಕುಂಟೆಗಳ ಪ್ರತಿಷ್ಠೆ, ಸಂಗೀತ, ಶಿಲ್ಪಕಾರ್ಯ, ಗೋವುಗಳಕ್ರಯ,ವಿಕ್ರಯ, ಕೃಷಿಸಂಗ್ರಹ, ಮುತ್ತು ರತ್ನ,ವಜ್ರಗಳ ಸಂಗ್ರಹಕ್ಕೆ ಪ್ರಶಸ್ತವಾದದ್ದು **ರೋಹಿಣಿ ನಕ್ಷತ್ರದಲ್ಲಿ ಹುಟ್ಟಿದವನ ಗುಣಗಳು**— ಸುಲಕ್ಷಣಹಸ್ತಗಳು, ಸುಂದರರೂಪ, ಅಗಲವಾದಹಣೆ, ಬುದ್ಧಿವಂತ, ಧನ ಧಾನ್ಯಸಂಗ್ರಹ,ಹೊಸಬಟ್ಟೆ,ವಸ್ತುಗಳಲ್ಲಿ ಪ್ರೀತಿ, ನೇತ್ರರೋಗಿ, ಅಲ್ಪಭಯ, ಸ್ತ್ರೀಜನರಾಗಿ,ತಾಯಿಗೂ,ಸೋದರಮಾವನಿಗೂ ಅರಿಷ್ಟ. **ಮೊದಲನೆಪಾದಕ್ಕೆ ಕುಜ ಅಧಿಪತಿ** ತಸ್ಕರಾಂಶ, ಕೆಂಗೂದಲು, ನಿಷ್ಠುರಸ್ವಭಾವ, **ಎರಡನೆಪಾದಕ್ಕೆ ಶುಕ್ರ ಅಧಿಪತಿ** ಭೋಕ್ತ್ರಾಂಶ, ಎತ್ತರವಾದದೇಹ, ಇಂದ್ರಿಯ ನಿಗ್ರಹ, ಸುಶೀಲನು, ಗುರು, ದೇವತಾದಿಹಿರಿಯರಲ್ಲಿ ಭಕ್ತಿ,ಪಶುಗಳಸಂಗ್ರಹಕನು. **೩ನೆಪಾದಕ್ಕೆ ಬುಧಅಧಿಪತಿ.** ಪಂಡಿತಾಂಶ. ವಿದ್ಯಾವಂತ, ಕವಿ, ಧೈರ್ಯಶಾಲಿ, ಶ್ರೀಮಂತ, ಸರ್ವಶುಭಕಾರ್ಯಗಳಲ್ಲಿ ಪ್ರೀತಿ, ವಿಶ್ವಾಸಿಕನು **೪ನೆ ಪಾದಕ್ಕೆ ಚಂದ್ರಅಧಿಪತಿ.** ಧನಾಂಶ. ಬಂಧುಬಾಂಧವರಲ್ಲಿ ಪ್ರೀತಿ, ಪರೋಪಕಾರ, ಬುದ್ಧಿವಂತ, ಪುಣ್ಯಕಾರ್ಯಾಚರಣೆಗಳಲ್ಲಿ ನಿಷ್ಠೆಯುಳ್ಳವನು.

ಈ ನಕ್ಷತ್ರದಲ್ಲಿ ಹುಟ್ಟಿದವನಿಗೆ **೧೦ವರ್ಷ ಚಂದ್ರಮಹರ್ದಶ.** ಇವನಅಂತರ್ದಶ ೧೦ತಿಂಗಳು. ಜನನವಾದ ೧೦ಘಳಿಗೆ,೧೦ದಿನ, ಅಥವಾ ೧ವರ್ಷದೊಳಗಾಗಿ ಭಯ ೨, ೪,೬,೮ನೇವರ್ಷಗಳಲ್ಲಿ ನೇತ್ರರೋಗ, ೨೭ರಲ್ಲಿ ಅಪಮೃತ್ಯು. ೩೨ರಲ್ಲಿ ಶತೃಭಯ ೪೨ರಲ್ಲಿ ನೀಚಜನರಿಂದ ಬಾಧೆ. ೫೨ರಲ್ಲಿ ಅಪಮೃತ್ಯು. ಇವು ಕಳೆದುಳಿದರೆ ೮೦ವರ್ಷ ಪರಮಾಯುಷ್ಯ.

**ಇತಿ ರೋಹಿಣಿ ನಕ್ಷತ್ರದ ವಿಚಾರ ವಿರಾಮಃ**

## ಮೃಗಶಿರ ನಕ್ಷತ್ರದ ಗುಣಕರ್ಮಾದಿಗಳ ವಿವರ.

**ಶ್ಲೋಕ**— ಇದಂ ಮೃಗಶಿರಾನಕ್ಷತ್ರಂಶ್ವೇತವರ್ಣಂ,ಶೀರ್ಷಂಮೃಗಶಿರಸ್ತ್ರೀಣಾತಿ

